ಪ್ರತಿಭಾಗ್ರಂಥಮಾಲೆ, ಧಾರವಾಡ. ವರ್ಷ ೨-ಕಿರಣ ೨.

# ಭೂಮಾತೆ

[ಪರ್ಲಬಕ್ಕಳ ಆಂಗ್ಲ ಕಾದಂಬರಿಯ ಸಂಕ್ಷಿಪ್ತಾನುವಾದ]

" ಗಾಂಗೇಯ "



ಮು. ೧೯೪೫ ಬೆಲೆ ೧-೮-೦

ಪ್ರಕಾಶಕರು :—
ಬಾಲಚಂದ್ರ ಘಾಣೇಕರ
ಪ್ರತಿಭಾಗ್ರಂಥಮಾಲೆ, ಧಾರವಾಡ.



ಮುದ್ರಕರು :—
ಎ. ಪಿ. ಚೌಗುಲೆ,
ವೀರಭಾರತ ಪ್ರೆಸ್, ಬೆಳಗಾಂವಿ.

# ಸಂಪಾದಕರ ನುಡಿ.



ಪ್ರತಿಭಾಗ್ರಂಥಮಾಲೆಯಲ್ಲಿ ಇದು ವರೆಗೆ ಪ್ರಕಟವಾದ ಪುಸ್ತಗಳಲ್ಲೆಲ್ಲ ಇದೇ ಚಿಕ್ಕ ಪುಸ್ತಕವೆನ್ನಬಹುದು. ಚಿಕ್ಕದಾದರೂ ಇದು ಪ್ರಖ್ಯಾತ ಕಾದಂಬರಿಯೆಂಬುದನ್ನು ಮರೆಯಲಾಗದು. ಮೂಲ ಲೇಖಿಕೆ "ಪರ್ಲ್ ಬಕ್"ಳಿಗೆ "ಗುಡ್ ಅರ್ಥ" ಯೆಂಬ ಈ ಸುಂದರಕೃತಿಗಾಗಿ ನೋಬೆಲ್ ಪ್ರಾಯಿಜ್ ದೊರೆತಿದೆ.

ಕನ್ನಡ ವಾಚಕರಿಗೂ ಮೆಚ್ಚಿನದಾಗಬಹುದೆಂಬ ಕಲ್ಪನೆಯಿಂದ ಶ್ರೀ "ಗಾಂಗೇಯ"ರು ಈ ಪುಸ್ತಕದ ಸಂಕ್ಷಿಪ್ತಾನುವಾದವನ್ನು ಮಾಡಿ ಕನ್ನಡ ವಾಚಕವೃಂದದ ಮುಂದೆ ಇಟ್ಟಿದ್ದಾರೆ. ಈ ಬಗ್ಗೆ ಮಾಲೆಯ ಪರವಾಗಿ ನಾವು ಅವರನ್ನು ಅಭಿನಂದಿಸುತ್ತೇವೆ

ಇನ್ನು ಮುದ್ರಣ ದೋಷಗಳು ಹೆಚ್ಚಾಗಿ ಉಳಿದುದಕ್ಕಾಗಿ ನಾವು ವಾಚಕರಲ್ಲಿ ಕ್ಷಮೆಯನ್ನು ಕೇಳದೆ ಗತ್ಯಂತರವಿಲ್ಲದಾಗಿದೆ. ಮುದ್ರಣನಿಯಂತ್ರಣ ಕಾನೂನು ಬಂದುದರಿಂದ ಕೋಟಾ ಇದ್ದ ಪ್ರೆಸ್ಸುಗಳನ್ನು ಹುಡುಕಿಕೊಂಡು ಹೋಗಬೇಕು. ಕೋಟಾಯಿದ್ದಲ್ಲಿ ಕೆಲಸಗಾರರಿಲ್ಲ. ಕೆಲಸಗಾರರಿದ್ದಲ್ಲಿ ಕೋಟಾಯಿಲ್ಲ. ನಾವು ಒಂದು ಕಡೆ. ಮುದ್ರಣವೊಂದು ಕಡೆ. ಅವಸರ ಬೇರೆ ಹೀಗಾಗಿ ತೊಂದರೆಯಾಗಿದೆ. ವಾಚಕರು ಮುದ್ರಣದಲ್ಲಿ ಉಳಿದ ಸಣ್ಣ ಪುಟ್ಟ ತಿದ್ದುಪಡಿಗಳನ್ನು ಮಾಡಿಕೊಂಡು ಓದಬೇಕಾಗಿ ಪ್ರಾರ್ಥನೆ. ಮುಂದಿನ ಆವೃತ್ತಿಯಲ್ಲಿ ತಪ್ಪು ಉಳಿಯದಂತೆ ನೋಡಿಕೊಳ್ಳುತ್ತೇವೆ.

ಭಾಲಚಂದ್ರ ಘಾಸೇಕರ.



# ಪ್ರತಿಭಾಗ್ರಂಥಮಾಲೆ, ಧಾರವಾಡ.

## —ಮೊದಲವರ್ಷದ ಪ್ರಕಟನೆಗಳು—

| | | | |
|---|---|---|---|
| ೧ | ಘಾಟೀಮುದುಕ | ಶ್ರೀ. ದೇವುಡು | ೧—೮—೦ |
| ೨ | ರಾಜಲಕ್ಷ್ಮೀ | ಶರತ್ | ೧—೮—೦ |
| ೩ | ಅನ್ನಪೂರ್ಣಾಮಂದಿರ | ನಿರುಪಮಾದೇವಿ | ೨—೦—೦ |
| ೪ | ವೈಕುಂಠನ ಮೃತ್ಯುಪತ್ರ | ಶರತ್ಕಾದಂಬರಿ | ೧—೮—೦ |
| ೫ | ಸಾವಿನ ಉಡಿಯಲ್ಲಿ ಭಾಗ ೧ | (ಕಾದಂಬರಿ) | ೧—೮—೦ |
| ೬ | ,, ಭಾಗ ೨ | (ಶ್ರೀ. ಎಸ್ಕೆ) | ೧—೮—೦ |
| ೭ | ಚಕಮಕಿ | ಶ್ರೀ ಬೇಂದ್ರೆ | ೨—೦—೦ |
| ೮ | ಗಂಡು-ಹೆಣ್ಣಿನ ಸಮಸ್ಯೆ | (ಭಾಗ ೧) | ೨—೦—೦ |
| | | | ೧೩—೮—೦ |

ಈ ಎಲ್ಲ ಪುಸ್ತಕಗಳನ್ನು ಒಮ್ಮೆಲೆ ತರಿಸಲಿಚ್ಛಿಸುವವರು ೧೨ ರೂ. ಮನಿಆರ್ಡರ್ ಮಾಡಬೇಕು. ನಾವೇ ನಮ್ಮ ವೆಚ್ಚದಿಂದ ಅವರಿಗೆ ಎಂಟೂ ಪುಸ್ತಕಗಳನ್ನು ಕಳಿಸಿಕೊಡುತ್ತೇವೆ.

ಸಂಚಾಲಕರು :

**ಸಮಾಜ ಪುಸ್ತಕಾಲಯ, ಧಾರವಾಡ.**

# ಭೂಮಾತೆ

ಅಂದು ಲಿಂಗನ ವಿವಾಹ. ಯಾಕೋ ಆತನಿಗೆ ಎದ್ದಾಗ ಎಲ್ಲವೂ ಹೊಸತಾಗಿ ಕಂಡುಬರುತ್ತದೆ. ಮನೆಯಲ್ಲಿ ಅಪೂರ್ವ ಸ್ತಬ್ಧತೆ. ಎಲ್ಲಿಯಾವರೂ ತಂದೆ ಕೆಮ್ಮುವ ಸಪ್ಪಳ ಒಮ್ಮೊಮ್ಮೆ ಕೇಳಬರುತ್ತಿತ್ತು. ದಿನಾಲು ತಂದೆ ಕೆಮ್ಮುವ ಸಪ್ಪಳದಿಂದ ಎಚ್ಚರವಾಗಿರುತ್ತಿದ್ದರೂ ಬಿದ್ದಲ್ಲಿಯೇ ಇರುತ್ತಿದ್ದ. ಆದರೆ ಇಂದು ಮಾತ್ರ ಹಾಗೆ ಇರಲು ಮನಸ್ಸು ಒಪ್ಪಲಿಲ್ಲ. ಎದ್ದು ಹಾಸಿಗೆಯನ್ನೆಲ್ಲ ಸುತ್ತಿ ಒಂದು ಬದಿಗಿಟ್ಟ. ಆಗಲೇ ಆಕಾಶದಲ್ಲೆಲ್ಲ ಅರುಣ ಕಿರಣವು ದಟ್ಟವಾಗಿ ವ್ಯಾಪಿಸಿತ್ತು. ಕಿಡಕಿಯಿಂದ ಆಕಾಶವೆಲ್ಲ ಕಾಣಿಸುತ್ತಿತ್ತು. ಆತ ಹೊರಗೆ ಮೋರೆ ಹಾಕಿ "ಅಯ್ಯೋ ವಸಂತ ಋತು ಬಂದು ಬಿಟ್ಟಿತಲ್ಲ" ಎಂದು ಉದ್ಗರಿಸಿದ.

ಈಹೊತ್ತು ಮನೆಯನ್ನೆಲ್ಲ ಸಾರಿಸಿ ಸ್ವಚ್ಛವಾಗಿಡಬೇಕೆಂದು ಹೇಳಲು ನಾಚಿಕೆಯಾಯಿತು. ಮಳೆ ತರುವಗಾಳಿ ಬೀಸುತ್ತಿದ್ದಿತು. ಗದ್ದೆಗಳೆಲ್ಲ ನೀರ ಬಸಿದ್ದವು. ಮಳೆಯಾಗದಿದ್ದರೂ ಅವರಿಗೆ ಒಂದು ತರದ ಧೈರ್ಯ ಬಂದು ಸಂತೋಷವಾಯಿತು. ಆತ ನಿನ್ನೆಯೇ ತಂದೆಯೊಡನೆ "ಅಪ್ಪಾ, ಇದೇ ರೀತಿ ಉರಿಬಿಸಿಲು ಬಿದ್ದರೆ ಗೋದಿಯ ತೆನೆಯಲ್ಲಿ ಕಾಳು ಆಗಲಿಕ್ಕಿಲ್ಲ" ಎಂದು ಹೇಳಿದ್ದ. ಆದರೆ ಇಂದಿನ ಸ್ಥಿತಿ ನೋಡಿ ದೇವರು ಕಣ್ಣು ತೆರೆದು ನೋಡಿದನೆಂದು ಭಾವಿಸಿಕೊಂಡ. ಬೆಳೆ ಚೆನ್ನಾಗಿ ಬಂದೀತೆಂಬ ಕಲ್ಪನೆಯಿಂದ ಸಂತೋಷಪಟ್ಟುಕೊಂಡ.

ಆತ ನಡುವಿನ ಕೋಣೆಗೆ ಹೋಗಿ ನೀರು ಕಾಯಿಸಿ ಹತ್ತಿದ. ತಪ್ಪೇಲಿಯಲ್ಲಿ ಗಡಿಗೆಯಿಂದ ನೀರು ತುಂಬಹತ್ತಿದ. ನೀರಿನ ಕೊಡವನ್ನೆತ್ತುವಾಗ ಆತನಿಗೆ ಬೇಸರವಾಯಿತು. ಯಾಕಂದರೆ ನೀರು ಸಿಗಲು ಪಡುತ್ತಿದ್ದ ಕಷ್ಟ ಅಷ್ಟಿಷ್ಟಲ್ಲ. ಇಂದು ಆತ ಮೈತುಂಬ ಸ್ನಾನ ಮಾಡಬೇಕು. ತಾಯಿಯ ತೊಡೆ ಬಿಟ್ಟಂದಿನಿಂದ ಆತನ ಬಗ್ಗೆ ಕಾಳಜಿ ಮಾಡಿದವರೇ ಇದ್ದಿರಲಿಲ್ಲ. ಇಂದು ಎಲ್ಲರೂ ಬರತಕ್ಕವರಿದ್ದಾರೆ. ಅದಕ್ಕಾಗಿ ಆತ ತನ್ನ ಮೈ ಚೆನ್ನಾಗಿ ತೊಳೆದುಕೊಳ್ಳಬೇಕಿತ್ತು.

ಒಲೆಯ ಮುಂದೆ ಹೋಗಿ ತುಸು ಹುಲ್ಲು ಒಗೆದ. ಚಕಮಕಿಯನ್ನು ತಿಕ್ಕಿ ಬೆಂಕಿ ಹೊತ್ತಿಸಿದ. ಹೀಗೆ ಬೆಂಕಿ ಹೊತ್ತಿಸಬೇಕಾದುದು ಇದೇ ಕೊನೆಯ ಸಲ ತಾಯಿ ಸತ್ತು ಇಂದಿಗೆ ಆರು ವರ್ಷವಾಗಿದೆ. ಅಂದಿನಿಂದ ದಿನಾಲು ಆತನಿಗೆ ಅದೇ ಕೆಲಸ. ಒಲೆ ಹೊತ್ತಿಸಿ, ನೀರುಕಾಸಿ ಥಾಲಿಯಲ್ಲಿ ಹಾಕಿ ತಂದೆ ಕೆಮ್ಮುವ ಕೋಣೆಗೆ ತೆಗೆದುಕೊಂಡು ಹೋಗಬೇಕು ತನ್ನ ಕೆಮ್ಮು ತುಸು ಕಡಿಮೆಯಾಗಲು ಕಾಸಿದ ನೀರು ತರುವ ಮಗನನ್ನೇ ಪ್ರತೀಕ್ಷಿಸುತ್ತ ತಂದೆ ಕೂತಿರುತ್ತಿದ್ದ. ಇನ್ನು ಮುಂದೆ ಚಳಿ ಮಳೆಯೆನ್ನದೆ ನೀರು ಕಾಸಲು ಏಳುವ ತೊಂದರೆ ಇರುವಂತಿಲ್ಲ. ಆತ ಹಾಸಿಗೆಯ ಮೇಲಿರುವಾಗಲೇ ಬಿಸಿ ನೀರು ಅಷ್ಟೇ ಏಕೆ ಚಹಾವೂ ಬರಬಹುದು. ಆಕೆ ದಣಿವರೆ ಮಕ್ಕಳು ಕೆಲಸ ಮಾಡಬಹುದು. ಆಕೆಗೆ ಎಷ್ಟೋ ಮಕ್ಕಳಾದೀತು. ಆತನಿಗೆ ಮನೆಯೆಲ್ಲ ಮಕ್ಕಳಿಂದ ತುಂಬಿದ ಹಾಗೆ ಗೋಚರಿಸಿತು. ಇನ್ನೂ ಮನೆಯಲ್ಲಿ ಮೂರು ಕೋಣೆ ಖಾಲಿಯಾಗಿಯೇ ಇದೆ. ತಾಯಿ ಸತ್ತಂದಿನಿಂದ ಆ ಮನೆಯ ಅರ್ಧ ಕಿರವಾಗಿಯೇ ಉಳಿದಿದೆ. ಅವನ ಚಿಗಪ್ಪನಿಗೆ ತುಂಬಾ ಮಕ್ಕಳು. "ಇವರಿಗೇಕಪ್ಪಾ ಇಷ್ಟು ದೊಡ್ಡ ಮನೆ? ತಂದೆ ಮಕ್ಕಳಿಬ್ಬರೂ ಒಂದೇ ಕೋಣೆಯಲ್ಲಿ ಮಲಗಿದರೆ ಮಗನ ದೇಹದ ಉಷ್ಣತೆಯಿಂದ ತಂದೆಯ ಶೈತ್ಯವಾದರೂ ಕಡಿಮೆಯಾದೀತು." ಎನ್ನುತ್ತಿದ್ದ ಅವನ ಚಿಗಪ್ಪ.

ಆದರೆ ಮುದುಕ ತಂದೆ "ನನ್ನ ಹಾಸಿಗೆ ನನ್ನ ಮೊಮ್ಮಗನಿಗಾಗಿ ಕಾದಿಟ್ಟಿದ್ದೇನೆ. ಆತ ನನ್ನ ವೃದ್ಧಾಪ್ಯದಲ್ಲಿ ನೆರವಾಗುವ" ಎನ್ನುತ್ತಿದ್ದ.

"ಈಗ ಮಕ್ಕಳು ಮರಿಗಳೆಲ್ಲ ಬರುವರು. ಮನೆತುಂಬ ಚಾಪೆ ಹಾಸಿಗೆಯ ರಾಶಿ ಬಿದ್ದೀತು." ಈ ರೀತಿ ಯೋಚಿಸುತ್ತಿದ್ದುದರಿಂದ ಅತ್ತ ಒಲೆಯ ಬೆಂಕಿ ಆರಿದುದರ ಜ್ಞಾಪಕವೇ ಇದ್ದಿರಲಿಲ್ಲ. ನೀರು ಆರಿದ್ದಿತು. ಅಷ್ಟೊತ್ತಿಗೆ ಒಬ್ಬ ಕೆಮ್ಮುವ ಮುದುಕ ಅನುಗೋಲಿನ ಸಹಾಯದಿಂದ ಅತ್ತ ಬರುತ್ತಿದ್ದ "ನನ್ನ ಪುಪ್ಪುಸವನ್ನು ಬೆಚ್ಚಗೆ ಮಾಡುವ ನೀರು ಇನ್ನೂ ತನಕ ಬಂದಿಲ್ಲ ವೇಕೆ!" ಎಂದು ನಿಟ್ಟುಸಿರಿಟ್ಟ.

ಮಗನು ತಂದೆಯೆಡೆಗೆ ನೋಡಿದ ನಾಚಿಕೆಯಾಯಿತು. "ಅಪ್ಪಾ, ಕಟ್ಟಿಗೆ ತುಸು ಒದ್ದೆ....."

ನೀರು ಕಾಯುವ ವರೆಗೂ ತಂದೆ ಕೆಮ್ಮುತ್ತಲೇ ಉಳಿದ ಆ ಮೇಲೆ ಒಂದು ಥಾಲಿ ನೀರನ್ನು ತೆಗೆದುಕೊಂಡು ಅದರಲ್ಲಿ ಹತ್ತಾರು ಚಹಾಸೊಪ್ಪು

ಹಾಕಿದ. ಅದನ್ನು ಕಂಡು ತಂದೆ "ಯಾಕೆ ವೃಥಾ ಖರ್ಚುಮಾಡುವಿ ! ಚಹಾ ಬೆಳ್ಳಿಗಿಂತಲೂ ತುಟ್ಟಿಯಾದೆ." ಎಂದ.

"ಇಂದಿನ ದಿನ ಆನಂದದ ದಿನ ತಿಂದುಂಡಷ್ಟು ಬಂತು."

ಅಂದಿನ ಚಹಾ ಕಂಡು ಆ ಲೋಭಿ ಮುದುಕನಿಗೆ ಕುಡಿಯುವ ಆಸೆ ಯಾಗಲಿಲ್ಲ. ಇಷ್ಟು ಬೆಲೆಯುಳ್ಳ ಚಹಾವನ್ನು ಹೇಗೆ ಕುಡಿದು ಹಾಳು ಮಾಡಲಿ ಎಂದು ಯೋಚಿಸಹತ್ತಿದ.

"ಅಪ್ಪಾ, ಚಹಾ ಆರೀತು" ಎಂದು ಲುಂಗ ಎಚ್ಚರಿಸಿದ.

"ಆಗಲಿ, ಆಗಲಿ! ಎಂದು ದೊಡ್ಡ ದೊಡ್ಡ ಗುಟುಕು ಮಾಡಿ ಕುಡಿಯ ಹತ್ತಿದ. ಅಷ್ಟೊತ್ತಿಗೆ ಮಗನು ಸ್ನಾನಕ್ಕಾಗಿ ದೊಡ್ಡ ಮರದ ಪಾತ್ರೆಯಲ್ಲಿ ನೀರು ಸುರುವುತ್ತಿದ್ದ "ಎಷ್ಟೋ ನೀರು ಇದು. ಇಡೀ ಗದ್ದೆಗೆ ನಾಕು" ಎಂದ.

"ಇಲ್ಲವಪ್ಪಾ, ನಾನು ಸರಿಯಾಗಿ ಮೈತೊಳೆಯದೆ ವರ್ಷವಾಗಿ ಹೋಯಿತು." ಆದರೆ ಬರುವ ಹೆಂಡತಿಯ ಮುಂದೆ ತಾನು ಚನ್ನಾಗಿ ಕಾಣಬೇಕೆಂಬ ಇಚ್ಛೆಯನ್ನು ತಂದೆಯ ಮುಂದೆ ಹೇಳಿಕೊಳ್ಳಲು ನಾಚಿಕೆ ಯಾಗಿತ್ತು. ಆತ ನೀರಿನ ಟಬ್ಬನ್ನು ಎತ್ತಿ ಸ್ನಾನಗೃಹಕ್ಕೆ ನಡೆದ. ಆಗ ಮುದುಕ "ಏನಪ್ಪಾ ಇದು, ದಿನಾ ಬೆಳಿಗ್ಗೆ ಚಹಾ, ಈ ರೀತಿ ಸ್ನಾನ, ನಮ್ಮಂತಹ ಬಡವರಿಗೆ ಹೇಳಿದ್ದಲ್ಲ." ಎಂದ.

"ಅಪ್ಪಾ ಇದೊಂದೇ ದಿನ. ಅಲ್ಲದೆ ನಾನು ಮಿಂದ ಮೇಲೆ ನೀರನ್ನೆಲ್ಲ ಗಿಡಗಳಿಗೇ ಚಲ್ಲುವೆ."

ಅಂತೂ ಮುದುಕ ಸುಮ್ಮನಾದ ವೆಂಗಲುಂಗನು ವಸ್ತ್ರ ತೆಗೆದು ಟಬ್ಬಿ ನಲ್ಲಿ ಕೂತ ಚನ್ನಾಗಿ ತಿಕ್ಕಿ ಮೈತೊಳೆದ. ಹಾಗೇ ಒಳಗೆ ಹೋಗಿ ತಾಯಿಯ ಹಳೇ ಪೆಟ್ಟಿಗೆಯಲ್ಲಿದ್ದ ವಸ್ತ್ರ ಧರಿಸಿಕೊಂಡ ದಪ್ಪ ವಸ್ತ್ರ ಹೊದ್ದುಕೊಳ್ಳದಿದ್ದರೆ ಚಳಿಯಾಗುತ್ತಿತ್ತು. ಆದರೂ ಆತ ಅದು ಹೊಲಸಾಗಿದ್ದುದರಿಂದ ಧರಿಸಲಿಲ್ಲ. ತನ್ನ ಹೆಂಡತಿ ಮೊದಲ ದಿನವೇ ಹಳೆಯ ವಸ್ತ್ರದಲ್ಲಿದ್ದ ತನ್ನನ್ನು ನೋಡಬಾರದೆಂದು ಆತನ ಹಂಬಲ. ಈಗ ತೊಟ್ಟುಕೊಂಡ ವಸ್ತ್ರ ಧರಿಸುತ್ತಿದ್ದುದು ಆತ ಉತ್ಸವಗಳಲ್ಲಿ ಮಾತ್ರವಾಗಿತ್ತು. ಅದೂ ವರ್ಷದಲ್ಲಿ ಹತ್ತು ದಿವಸ ಮಾತ್ರ. ಹಳೆಯ ಮೇಜಿನಲ್ಲೊಂದು ಬಾಚಣಿಕೆ ಇತ್ತು. ಅದನ್ನು ತೆಗೆದು ಕೊಂಡು ಕೂದಲನ್ನು ಹಿಕ್ಕತೊಡಗಿದ.

"ಮಗನೇ, ಇಂದು ನನಗೇನೂ ತಿನ್ನಲಿಕ್ಕಿಲ್ಲವೇ? ನನ್ನಂತಹ ಮುದುಕ ಹಸಿವೆಯನ್ನು ಬಹಳ ಹೊತ್ತು ತಡೆಯಲಾರ" ಎಂದು ತಂದೆ ಬಂದು ಹೇಳಿದ.

"ನಾನು ಬಂದೆ" ಎಂದವನೇ ಕೂದಲನ್ನು ಸರಿಪಡಿಸಿಕೊಂಡ.

ತುಸು ಹೊತ್ತಿನಲ್ಲಿ ಟಬ್ಬನ್ನು ತೆಗೆದುಕೊಂಡು ಹೊರಹೊರಟ್ಟು, ಊಟದ ಪರಿವೆಯೇ ಅವನಿಗಿದ್ದಿಲ್ಲ. ಇದ್ದ ಅನ್ನಕ್ಕೇ ತುಸು ನೀರು ಹಾಕಿ ತಂದೆಗೆ ಕೊಟ್ಟರಾಯಿತು, ತನಗಂತೂ ಉಪವಾಸ, ಎಂದು ಭಾವಿಸಿದ್ದ. ಆತ ನೀರನ್ನೆಲ್ಲ ಹತ್ತಿರದ ಗದ್ದೆಗೆ ಸುರುವಿದ. ಆ ಮೇಲೆ ಕಾಸಿದ ನೀರು ಉಳಿಯಲಿಲ್ಲವಲ್ಲ ಎಂಬ ಯೋಚನೆ ಬಂದಿತು; ಒಲೆಯ ಸಮೀಪಕ್ಕೆ ಹೋಗಿ ನೋಡಿದ ಬೆಂಕಿ ಇರಲಿಲ್ಲ.

"ಥೂ, ಈ ಮುದುಕನಿಗಂತೂ ತಿನ್ನುಣ್ಣುವುದರ ಹೊರತಾಗಿ ಇನ್ನೇನೂ ಗೊತ್ತಿಲ್ಲ. ಎಂದು ಕೊಂಡ.

ಹತ್ತಿರದ ಬಾವಿಯಿಂದ ನೀರು ತಂದು ಲಗುಬಗೆಯಿಂದ ಅಡಿಗೆ ತಯಾರಿಸಿದ. ಆ ಮೇಲೆ ಅನ್ನಬಡಿಸಿಕೊಂಡು ತಂದೆಯ ಬಳಿ ಇಟ್ಟ. "ಅಪ್ಪಾ, ಸಂಜೆಗೆ ರೊಟ್ಟಿ ಮಾಡುವೆ. ಈಗ ಅನ್ನ ಮಾತ್ರ ತಂದಿದ್ದೇನೆ. ಎಷ್ಟಾದರೂ ವಸಂತಕಾಲ. ತುಸು ಕಡಿಮೆಯಾದರೂ ಚಿಂತೆ ಇಲ್ಲ." ಎಂದ.

ತಂದೆಗೆ ಮಗನ ಮಾತಿನ ಕಡೆಗೆ ಲಕ್ಷ್ಯವಿರಲಿಲ್ಲ. ಉಣ್ಣುವುದರಲ್ಲಿಯೇ ಮಗ್ನನಾಗಿದ್ದ.

ವೆಂಗಲುಂಗ ತನ್ನ ಕೋಣೆಗೆ ಹೋಗಿ ಹಾಸಿಗೆಯ ಗದ್ದಿದ ಮೇಲೆ ಕೈಯಾಡಿಸಿಕೊಂಡ. ಸೂರ್ಯ ಇನ್ನೂ ಮೂಡುವುದರಲ್ಲಿದ್ದ ಆತ ಹಣದ ಚೀಲ ತೆಗೆದು ಎಣಿಸಿದ. ಅದರಲ್ಲಿ ೬ ಬೆಳ್ಳಿಯ ನೊಹರು ಸುಮಾರು ಹನ್ನೆರಡು ತಾಮ್ರದ ನಾಣ್ಯ ಇದ್ದವು. ಸಂಜೆಗೆ ತನ್ನ ಗೆಳೆಯರಿಗೆಲ್ಲ ಔತಣ ಕೊಟ್ಟಿದ್ದೇನೆಂಬ ಮಾತನ್ನಿನ್ನೂ ತಂದೆಗೆ ಹೇಳಿರಲಿಲ್ಲ. ತನ್ನ ಚಿಗಪ್ಪನ ಮಗ ಹಾಗೂ ನೆರೆಹೊರೆಯ ಮೂವರು ಒಕ್ಕಲಿಗರಿಗೂ ಆತ ಸಂಜೆಯ ಊಟಕ್ಕೆ ಹೇಳಿದ್ದ. ಸಣ್ಣಕ್ಕಿ, ಮೀನ, ಇವುಗಳನ್ನೆಲ್ಲ ಪೇಟೆಯಿಂದ ತರುವ ವಿಚಾರದಲ್ಲಿದ್ದ, ಹಣವುಳಿದರೆ ಇನ್ನೂ ಏನೇನನ್ನೋ ಕೊಂಡುಕೊಳ್ಳಬೇಕೆಂದು ಮಾಡಿದ್ದ. ಆದರೆ ಕೂದಲನ್ನು ಹೊಡೆಯಿಸಿಕೊಳ್ಳುವುದೇ ಅತಿ ಮಹತ್ವದ್ದೆಂದು ಆತನಿಗನಿಸಿತು.

ತಂದೆಯನ್ನೊಬ್ಬನನ್ನೇ ಬಿಟ್ಟು ಪಟ್ಟಣದ ಕಡೆಗೆ ಹೊರಟ. ಆಗ
ಮಳೆಬರುವ ಲಕ್ಷಣವಿದ್ದಿತು. " ಭೂದೇವಿಯ ಮನೆಯಲ್ಲಿ ದೀಪ ಹಚ್ಚಲೇ
ಬೇಕು." ಎಂದು ನಿರ್ಧರಿಸಿಕೊಂಡ.

ಗದ್ದೆಯೊಳಗಿನ ಅಡ್ಡ ತಿಡ್ಡ ತಿರುವು ಮುರುವು ದಾರಿಗಳಿಂದ ಮುಂದು
ವರಿದ. ಹತ್ತಿರವೇ ಪೇಟೆಯ ಕುರುಹುಗಳು ಕಾಣಿಸಹತ್ತಿದವು. ಅದೇ ಹಾದಿ
ಯಲ್ಲಿ ಆತನ ವಧುವಿನ ಮನೆ. ಆತನ ಪತ್ನಿ, ದಾಸ್ಯದಲ್ಲಿಯೇ ಬೆಳೆದವಳು.
ಆ ಮನೆಗೆ "ಹ್ಯಾಂಗನ ಕೋಣೆ" ಯೆಂದು ಹೆಸರು. ದಾಸಿಯನ್ನು ಲಗ್ನವಾ
ಗುವದಕ್ಕಿಂತ ಹಾಗೇ ಉಳಿಯುವದು ವಾಸಿ ಎಂದೆನ್ನುತ್ತಿದ್ದರು. ಈ ಮಾತ
ನ್ನೊಮ್ಮೆ ಆತ ತಂದೆಯ ಮುಂದೆ ಹೇಳಿದ " ಹಾಗಾದರೆ ಅಪ್ಪ, ನನ್ನ ಲಗ್ನ
ವಾಗಲಿಕ್ಕಿಲ್ಲವೇನೋ?" "ಮಗನೇ ನಮ್ಮಂತಹ ಬಡವರಿಗೆ ದೊಡ್ಡವರ
ಹೆಣ್ಣು ಹ್ಯಾಗೆ ಸಿಗಬೇಕು. ಅವರಿಗೆ ಬಂಗಾರದ ದಾಗಿನೆ, ಬಣ್ಣ ಬಣ್ಣದ
ಜರತಾರೀ ಸೀರೆ ಬೇಕು. ಅದಕ್ಕಾಗಿ ನಮ್ಮಂತವರಿಗೆ ದಾಸಿಯಾದರೂ ಅಡ್ಡಿ
ಯಿಲ್ಲ." ಎಂದು ತಂದೆಯೆಂದಿದ್ದ.

ಅದಕ್ಕಾಗಿ ಒಮ್ಮೆ 'ಹ್ಯಾಂಗನ ಕೋಣೆ' ಗೆ ಹೋಗಿ ಕೇಳಿಯೂ
ನೋಡಿದ್ದ. ಅಲ್ಲಿ ದಾಸಿಯರೇನೋ ಇದೆ. ಆದರೆ ಅಷ್ಟೇನೂ ಸುಂದರಿಯಿಲ್ಲ
ಎಂದು ತಿಳಿದು ದುಃಖಿತನಾಗಿದ್ದ.

ಈ ಮಾತು ತಂದೆಗೆ ತಿಳಿದಾಗ "ಮಗನೇ, ಸುಂದರ ಹೆಂಡತಿಯನ್ನು
ತೆಗೆದುಕೊಂಡೇನು ಮಾಡುವೆ? ನಾವೆಲ್ಲಾದರೂ ಕೆಲಸದ ಮಂದಿ. ಕೈ ಕೆಸ
ರಾದ ಹೊರತು ಹೊಟ್ಟೆಗೆ ಹಿಟ್ಟೇ ದೊರೆಯದು. ಮನೆತನ ನಡಿಸಿಕೊಂಡು
ಮಕ್ಕಳನ್ನು ಹಡೆದು, ಗದ್ದೆ ಕೆಲಸ ನೋಡುವಂತಹ ಹೆಂಗುಸಿದ್ದರೆ ಸಾಕು.
ಉಳಿದ ಹೆಂಗಸು ಬಂದರೆ ನಮ್ಮ ಕೆಲಸ ಹೇಗೆ ಸಾಗೀತು? ಸುಂದರ ಹೆಂಡತಿ
ಬಂದರೆ ಕನ್ನಡಿ ನೋಡಲಿಕ್ಕೇ ವೇಳೆ ಸಾಕಾಗಲಿಕ್ಕಿಲ್ಲ. ದಿನ ದಿನ ಹೊಸ
ಹೊಸ ಸೀರೆ ಬೇಕಾದೀತು. ಅದೆಲ್ಲ ನಮ್ಮಿಂದೆಲ್ಲಿ ಸಾಧ್ಯ? ಎಂದಿದ್ದ.

ಮಗನಿಗೂ ತಂದೆಯ ಮಾತು ಹೌದೆನಿಸಿತು. ಆದರೂ ಮೋರೆ ಮೇಲೆ
ಕಲೆಯಿಲ್ಲದ, ಕಿಸಬಾಯಿಯಿಲ್ಲದ ಹೆಂಡತಿಯನ್ನಾದರೂ ತರಬೇಕೆಂದು
ನಿರ್ಧರಿಸಿಕೊಂಡ.

ಈಗಿನ ಹೆಂಡತಿಗೆ ಹಾಗೇನೂ ಕಲೆ ಬಿದ್ದಿಲ್ಲವೆಂದು ಗೊತ್ತಾಗಿತ್ತು.
ಬರುವ ಸೊಸೆಗಾಗಿ ತಂದೆ ಮಕ್ಕಳಿಬ್ಬರೂ ಕೂಡಿ ಬಂಗಾರದ ಗಿಲೀಟಿನ

ಉಂಗುರ, ಕಿವಿಯ ಕುಡುಕುಗಳನ್ನು ಕೊಂಡರು. ಅವನಿಗೆ ಅವಳ ಬಗ್ಗೆ ಇನ್ನೇನೂ ಹೆಚ್ಚಿನ ಮಾಹಿತಿ ಇರಲಿಲ್ಲ.

ಆತ ಊರನ್ನು ಸೇರಿದ ಜನರ ಓಡಾಟವಿನ್ನೂ ಆರಂಭವಾಗಿರಲಿಲ್ಲ. ಆತ ನೇರವಾಗಿ ಸಲೂನಿಗೆ ಹೊರಟ. ಎಷ್ಟೋ ಒಕ್ಕಲಿಗರು ಹಿಂದಿನ ದಿನ ತಮ್ಮ ಸಾಮಾನನ್ನು ಮಾರಲು ಪೇಟೆಗೆ ಬಂದಿದ್ದರು. ಬೆಳಗ್ಗೆ ತರಕಾರಿ ಮಾರಿದರಾಯಿತೆಂದು ಕೆಲವರು ಅಲ್ಲಿಯೇ ತಂಗಿದ್ದರು. ರಾತ್ರಿಯೆಲ್ಲ ಮುದುಡಿಕೊಂಡು ಬಿದ್ದಿದ್ದರು. ಈಗ ಅವರೆಲ್ಲ ತನ್ನ ಗೇಲಿಮಾಡಬಹುದೆಂದು ಗೊತ್ತಿದ್ದುದರಿಂದ ಅವರೆಲ್ಲರ ಕಣ್ಣುತಪ್ಪಿಸಿ ಜಾರಿದ. ಕೊನೆಯ ಅಂಗಡಿಗೆ ಹೋಗಿ ಅಲ್ಲಿಯ ನಾಪಿಕನನ್ನು ಕರೆದ. ಚವಲದವನು ಥಾಲಿಯಲ್ಲಿ ಬಿಸಿನೀರನ್ನು ಸುರುವಿಕೊಂಡ.

" ಪೂರ್ಣ ತಲೆಯನ್ನೂ ಚವಲ ಮಾಡಬೇಕೇ? "

" ತಲೆ ಮತ್ತು ಗಡ್ಡ ಮಾಡಿದರೆ ಸಾಕು. "

" ಕಿವಿ, ಮೂಗು ಬೇಡವೇ ? "

" ಇವಕ್ಕೆಲ್ಲ ಮುಂಡೆ ಮಾಡುವದಾದರೆ ಇನ್ನೆಷ್ಟು ದುಡ್ಡು ಹತ್ತೀತು ? "

" ನಾಲ್ಕು ದುಡ್ಡು. "

" ಹಾಗಾದರೆ ನಾನು ಕೊಡುವೆ. "

" ಆದೀತು. ಆದರೆ ನಾನೊಂದು ಕಿವಿ, ಒಂದು ಮೂಗನ್ನಷ್ಟೇ ಹಸನ ಮಾಡುವೆ. "

ಈ ಮಾತನ್ನು ಕೇಳಿ ಎಲ್ಲರೂ ನಗಹತ್ತಿದರು.

" ಏನು ಬೇಕಾದ್ದು ಮಾಡಿಕೋ ? "

ಕೆಲಸಿಗನು ಸಾಬೂನ ಹಚ್ಚಿದ " ಈ ಒಕ್ಕಲಿಗನಿಗೆ ಕೂದಲು ಹೊಡೆದರೆ ಚನ್ನಾಗಿ ಕಾಣುವದು. ಈಗಿನ ರೀತಿಯಂತೆ ಚಂಡಿಕೆ ತೆಗೆದುಬಿಡುತ್ತೇನೆ " ಎಂದ.

ಲುಂಗನಿಗೆ ನಾಚಿಕೆಯಾಯಿತು. " ತಂದೆಗೆ ಕೇಳದ ಹೊರತು ಚಂಡಿಕೆ ತೆಗೆಯಲಾರೆ " ಎಂದು ಕೂಗಿದ ಕೆಲಸಿಗ ನಕ್ಕು ಚಂಡಿಕೆಯನ್ನು ಇದ್ದಂತೆಯೇ ಇಟ್ಟ. ಮುಂಡೆ ಮಾಡಿಸಿದ ನಂತರ ದುಡ್ಡು ತೆಗೆದು ನಾಪಿಕನ ಮುಂದಿಟ್ಟ, 'ಒಂದು ಮುಂಡೆಗೆ ಇಷ್ಟೊಂದು ದುಡ್ಡೇ' ಎಂದು ಒಮ್ಮೆ ಅನಿಸಿತು. ಏನೇ ಆಗಲಿ; ಒಂದೇ ದಿವಸ' ಎಂದು ಸಮಾಧಾನ ಹಚ್ಚಿಕೊಂಡ.

ಅಲ್ಲಿಂದ ಆತ ಪೇಟೆಗೆ ಬಂದ. ಒಂದು ಸೇರು ಮಾಂಸ ಕೊಂಡ. ಮಾಂಸ ಮಾರುವಾತ ಕಮಲದ ಎಲೆಯಲ್ಲಿ ಕಟ್ಟಿಕೊಟ್ಟ. ಅಲ್ಲಿಂದ ಇನ್ನೊಂದು ಅಂಗಡಿಗೆ ಹೋಗಿ ಎರಡು ಮೇಣಬತ್ತಿಯನ್ನೂ, ಸುಗಂಧ ದ್ರವ್ಯಗಳನ್ನೂ ಕೊಂಡ, ಆಮೇಲೆ ಹ್ಯಾಂಗನ ಕೋಣೆಯ ಬದಿಗೆ ಹೊರಟ. ಈಗ ಮನಸ್ಸಲ್ಲಿ ಸಂಕೋಚ ಮನೆಮಾಡಿತ್ತು.

ಆವರ ಮನೆಯ ಬಾಗಿಲು ತಲುಪಿದಾಗ ಅಂಜಿಕೆಯೆನಿಸಹತ್ತಿತ್ತು. ತಾನೊಬ್ಬನೇ ಬರುವುದು ಉಚಿತವಲ್ಲ. ಬರುವಾಗ ತಂದೆಗಾಗಲೀ, ಚಿಗಪ್ಪನಿಗಾಗಲೀ, ಬಾರೆಂದು ಹೇಳಬೇಕಿತ್ತು. ಇನ್ನೂವರೆಗೆ ಆತ ಯಾರ ಮನೆಗೂ ಹೋದವನಲ್ಲ. ತಾನಾಗಿಯೇ ಮದುವೆಗೆ ಬಂದಿರುವೆನೆಂದು ಹೇಗೆ ಬಾಯ್ಬಿಟ್ಟು ಹೇಳುವುದು ?

ಎಷ್ಟೋ ಹೊತ್ತು ಬಾಗಿಲಲ್ಲಿಯೇ ನಿಂತ. ಬಾಗಿಲು ಬಂದಾಗಿತ್ತು. ಅಲ್ಲಿ ಯಾರೂ ಇರಲಿಲ್ಲ. ಆತನಿಗೆ ತಲೆ ತಿರುಗಿದಂತೆ ಭಾಸವಾಗಹತ್ತಿತು. ಬೆಳಗ್ಗಿನಿಂದ ಆತ ಬಾಯಲ್ಲಿ ನೀರು ಸಹ ಹಾಕಿರಲಿಲ್ಲ. ಅದಕ್ಕಾಗಿ ಅಂಗಡಿಗೆ ಹೋಗಿ ಏನಾದರೂ ತಿಂದು ಬರುವದೆಂದು ಯೋಚಿಸಿ ಒಂದು ಅಂಗಡಿಗೆ ಹೋಗಿ ಮೇಜಿನ ಮೇಲೆರಡು ಬಿಲ್ಲಿ ಒಗೆದು ಒಬ್ಬ ಹೊಲಸು ವಸ್ತ್ರದ ಮಾಣಿ ಬಂದು ತಿನ್ನಲು ಕೊಟ್ಟ.

"ಮತ್ತೇನು ಕೊಡಲಿ" ಎಂದು ಹುಡುಗ ಕೇಳಿದ.

ವೆಂಗಲುಂಗ ಇನ್ನೇನು ಬೇಡವೆಂದು ತಲೆಯಲ್ಲಾಡಿಸಿದ. ಆತ ಕೋಣೆಯಲ್ಲೆಲ್ಲ ಕಣ್ಣು ಹೊರಳಿಸಿದ. ಸಣ್ಣ ಕೋಣೆ. ಅಲ್ಲಿಂದಿಲ್ಲಿಗೂ ಮೇಜೇ-ಮೇಜು. ಇನ್ನೂ ಕೆಲವರು ಅಲ್ಲಿ ತಿನ್ನುತ್ತ ಕುಳಿತಿದ್ದರು. ಆತನ ಪರಿಚಯದವರಾರೂ ಇದ್ದಿಲ್ಲ. ಅದು ಬಡವರು ಕುಡಿದು ಹೋಗುವ ಸ್ಥಳ. ಅವರಲ್ಲೆಲ್ಲ ಲುಂಗನೇ ತುಸು ದುಡ್ಡಿದ್ದವನೆಂದು ಒಡೆದು ಕಾಣುತ್ತಿತ್ತು. ಅದಕ್ಕಾಗಿ ಒಬ್ಬ ಬಿಕ್ಷುಕನು ಅವನ ಹತ್ತಿರ ಬಂದು "ಮಹಾರಾಜ, ಊಟವಿಲ್ಲದೆ ಎರಡು ಮೂರು ದಿನವಾಯಿತು. ಏನಾದರೂ ಕೊಡಿ" ಎಂದನು.

ವೆಂಗಲುಂಗನಿಗೆ ಮಹಾರಾಜ ಎಂದು ಇನ್ನೂತನಕ ಕರೆದವರಿರಲಿಲ್ಲ. ಅದರಿಂದ ಆತ ಎರಡು ಬಿಲ್ಲಿಯನ್ನು ಸಂತೋಷದಿಂದ ಕೊಟ್ಟ. ಭಿಕ್ಷುಕನು ಕೂಡಲೇ ಚಂದಿಯಲ್ಲಿ ಭದ್ರವಾಗಿರಿಸಿದ.

ವೆಂಗಲುಂಗ ಹಾಗೆಯೇ ಕುಳಿತಿದ್ದ. ಹೊತ್ತೇರುತ್ತಿತ್ತು. ಅಷ್ಟೊತ್ತಿಗೆ ಮಾಣಿಯು ಬಂದು " ನಿಮಗೇನು ಬೇಕು ? ಸುಮ್ಮನೇ ಕೂತರೂ ಹಣ ಬೀಳುತ್ತದೆ. " ಎಂದ.

ಆತ ಎದ್ದು ಮನೆಯ ದಾರಿ ಹಿಡಿಯತಕ್ಕವ ಆದರೆ ' ಹ್ವಾಂಗನ ' ಕೋಣೆಯ ಎಚ್ಚರವಾಯಿತು. ವೈಮುರಿ ದುಡಿದಾಗ ಬೆವರಿಡುವಂತೆ ಬೆವ ರಿಟ್ಟಿತು. " ಆಗಲಿ, ಚಹಾತನ್ನಿ " ಎಂದ.

" ದುಡ್ಡು ತೆಗೀರಲ್ಲ "

ಹಣತೆತ್ತು ಚಹಾಕುಡಿದ. ಗುರುತಿನವನೊಬ್ಬನು ಚಹಾಕುಡಿಯಲು ಬರುತ್ತಿರುವುದನ್ನು ಕಂಡು ಲಗುಬಗೆಯಿಂದ ಹೊರಬಿದ್ದ.

" ಏನು ಮಾಡಲಿ, ಏನು ಮಾಡಿದರೂ ಹೋಗಲೇಬೇಕು. " ಎಂದು ಯೋಚಿಸುತ್ತಾ " ಹ್ವಾಂಗಮಂದಿರ " ದ ದಾರಿ ಹಿಡಿದ ಈಗಲೂ ಮಂದಿರದ ಬಾಗಿಲು ಮುಚ್ಚಿತ್ತು. ಆದರೆ ಬಾಗಿಲು ಕಾಯುವವ ದಣಿದು ಉಸಿರ್ಗರೆಯು ತ್ತಿದ್ದ. ಲುಂಗನ ಕೈಯ್ಯಲ್ಲಿದ್ದ ಬುಟ್ಟಿಯನ್ನು ನೋಡಿ ಯಾರೋ ಕಾಯಿಪಲ್ಲೆ ಮಾರುವವನಿರಬೇಕೆಂದು ಭಾವಿಸಿ ' ಏ ' ಏನು ತಂದಿರುವೆಯೋ ? " ಎಂದು ಕೇಳಿದ.

ಲುಂಗನಿಗೆ ಏನೆನ್ನಬೇಕೆಂದೂ ತಿಳಿಯಲಿಲ್ಲ. ಅಂತೂ ಕಷ್ಟಪಟ್ಟು ತಾನು " ವೆಂಗ ಲುಂಗ " ನೆಂದು ಹೇಳಿದ.

" ಆಗಲಿ, ಯಾಕೆ ಬಂದೆ ? "

" ನಾನು ಬಂದಿರುವೆ "

" ಅದಂತೂ ನಾನು ಬಲ್ಲೆ "

" ಒಬ್ಬಳನ್ನು "........

" ಹೀಗೋ ? ಈಹೊತ್ತು ಬರುವ ವರನನ್ನು ಸ್ವಾಗತಿಸಲು ನನ್ನನ್ನು ನಿಯಮಿಸಿದ್ದರು. ಆದರೆ ನಿನ್ನೊಡನೆ ಬುಟ್ಟಿ ಇದ್ದುದರಿಂದ ಒಮ್ಮೆಲೇ ಗುರುತು ಹಿಡಿಯಲಾಗಲಿಲ್ಲ. "

" ನಾನೊಬ್ಬನೇ ಒಳಗೆ ಹೋಗಬಹುದಲ್ಲ. ತುಸು ತಿನ್ನುವ ಸಾಮಾನು ತಂದಿದ್ದೆ. "

" ಮುದಿಯಜಮಾನ ನಿಮ್ಮನ್ನು ಹೊಡೆದು ಬಿಡಬಹುದು. ಅದ ಕ್ಕಾಗಿ ತುಸು ಹಣ ತೆತ್ತು ಬಿಡು ಎಂದ. ಆತನಿಗೆ ವೆಂಗಲುಂಗನೊಬ್ಬ ಏನೂ ಅರಿಯದವನೆಂದು ಗೊತ್ತಾಗಿತ್ತು.

ಬಾಗಿಲು ಕಾಯುವವನ ಕೈ ಬೆಚ್ಚಗೆ ಮಾಡಬೇಕಾದೀತೆಂದು ತಿಳಿ ಯಲು ಲುಂಗನಿಗೆ ಎಷ್ಟೋ ಹೊತ್ತು ಹಿಡಿಯಿತು.

" ನಾನು ತುಂಬಾ ಬಡವ. "

" ಆಗಲಿ, ನಿನ್ನ ಹತ್ತಿರ ಎಷ್ಟು ಹಣವಿದೆ ? "

" ಒಂದು ಬೆಳ್ಳಿಯ ನಾಣ್ಯ, ತಾಮ್ರದ ನಾಣ್ಯ ಇದೆ. "

" ಬೆಳ್ಳಿಯದು ನನಗೆ " ಎಂದವನೇ ತೆಗೆದುಕೊಂಡು ಟೊಂಕಕ್ಕೇರಿ ಸಿದ. ಹಾಗೂ ಒಳಹೊಕ್ಕು " ವರನು ಬಂದ, ವರನು ಬಂದ " ಎಂದು ಸುದ್ದಿ ಹಬ್ಬಿಸಿದ.

ವೆಂಗಲುಂಗನಿಗೆ ಸಂಕೋಚಕ್ಕಿಟ್ಟುಕೊಂಡಿತು. ಆತ ಬುಟ್ಟಿಯನ್ನೆತ್ತಿ ಆತನ ಹಿಂದಿಂದೇ ನಡೆದ. ಎಷ್ಟೋ ಕೋಣೆಗಳನ್ನು ದಾಟಿದ ಮೇಲೆ ಒಂದು ಕೋಣೆಯಲ್ಲಿ ಲುಂಗನನ್ನು ಕೂಡ್ರಿಸಿ, ಆಳು ಇನ್ನೊಂದು ಕೋಣೆಗೆ ಹೋದ. ಕೆಲಹೊತ್ತಿನಲ್ಲಿಯೇ ತಿರುಗಿ ಬಂದು " ಯಜಮಾನತಿಯು ನಿಮ್ಮನ್ನು ಕರೆ ಯುತ್ತಿದ್ದಾಳೆ. " ಎಂದ.

ವೆಂಗಲುಂಗ ಹೊರಟ. ಆತನ ಕೈಯಲ್ಲಿ ಬುಟ್ಟಿಯಿತ್ತು. ಅದನ್ನು ತೆಗೆ ದುಕೊಳ್ಳಬಾರದೆಂದು ಆಳು ಕೂಗಿ ಹೇಳಿದ.

ಲುಂಗನಿಗೆ ಇದನ್ನಾರಾದರೂ ತೆಗೆದುಕೊಂಡು ಹೋದಾರೆಂಬ ಭಯ. ಅದಕ್ಕಾಗಿ ಆತ ಹಿಂದೆ ಮುಂದೆ ನೋಡಹತ್ತಿದ.

" ಇಂತಹದನ್ನೆಲ್ಲ ನಾವು ನಾಯಿಗೆ ಒಗೆಯುತ್ತೇವೆ. " ಎಂದು ಆ ಆಳು ಅದನ್ನು ಕಸಿದು ಕೆಳಗಿಟ್ಟ. ಲುಂಗನ ಕಾಲು ನಡಗುತ್ತಿತ್ತು. ಆತ ಬೀಳುವು ದರಲ್ಲಿದ್ದ. ಆಳು ಸಂಭಾಳಿಸಿ ಹಿಡಿದ. " ಇದೇನಪ್ಪ, ಒಡತಿಯ ಮುಂದೆ ಹೋಗಿ ಉದ್ದಂಡ ನಮಸ್ಕಾರ ಮಾಡಲು ಬಗೆದಿರುವೆಯಾ ? "

ಅಲ್ಲಿ ಒಬ್ಬ ಮುದುಕಿ ಕುಳಿತಿದ್ದಳು. ಆಕೆಯು ಕೃಶವಾದ ಶರೀರದ ವಳು. ಬೆಲೆಯುಳ್ಳ ವಸ್ತ್ರ ತೊಟ್ಟಿದ್ದಳು. ಹತ್ತಿರದಲ್ಲಿ ಅಫೀಮಿನ ಚಿಲುಮೆ ಯಿತ್ತು. ನೆರೆಬಿದ್ದ ಮೋರೆಯಲ್ಲಿ ಹುಗಿದು ಹೋದ ಕಣ್ಣುಗಳಿಂದ ಲುಂಗ ನೆಡೆಗೆ ನೋಡಿದಳು. ಆತ ಮೊಣಕಾಲೂರಿ ನಮಸ್ಕರಿಸಿದ. ಆಕೆ ಆಳಿಗೆ

" ಈತನಿಗೆ ಏಳಲು ಹೇಳು. ಇಂತಹ ಶಿಷ್ಟಾಚಾರ ಬೇಡ. ಈತನೇನು ಹೆಣ್ಣಾಗಿ ಬಂದಿರುವನೇ? " ಎಂದು ಕೇಳಿದಳು.

" ಹೌದು, ದನಿಯರೇ ? "

" ಹಾಗಾದರೆ ಇವನೇಕೆ ಮಾತನ್ನಾಡುವದಿಲ್ಲ.

" ಅವನೊಬ್ಬ ಮೂರ್ಖನಿದ್ದಂತಿದೆ "

" ದನಿಯರೇ, ನಾನೊಬ್ಬ ಬಡ ಒಕ್ಕಲಿಗ. ನಿಮ್ಮಂತವರ ಮುಂದೆ ಹೇಗೆ ಮಾತಾಡಬೇಕೆಂದು ತಿಳಿಯದು. "

ಆಕೆ ಚಿಲುಮೆಯನ್ನೆತ್ತಿ ಸೇದಹತ್ತಿದಳು. ಅಮಲೇರಹತ್ತಿತು. ಎಷ್ಟೋ ಹೊತ್ತಿನ ಮೇಲೆ " ಇಲ್ಲಿ ನಿಂತು ಏನು ಮಾಡುತ್ತಿಯೋ ? " ಎಂದು ಗದರಿದಳು.

ಅಳು ಮಾತಾಡಲಿಲ್ಲ. ಲುಂಗನಿಗೆ ಆಶ್ಚರ್ಯನಾಯಿತು. " ದನಿಯರೇ, ನಾನು ಹೆಂಡತಿಯ ದಾರಿ ನೋಡುತ್ತಿರುವೆ " ಎಂದ.

" ಆರಿ, ಯಾರು ಎಂತ ಹೆಂಗಸು ! " ಎನ್ನುವಷ್ಟರಲ್ಲಿ ದಾಸಿಯು ಕಿವಿಯಲ್ಲಿ ಹೇಳಿದುದರಿಂದ " ಹೀಗೋ, ಓಲಾನಳ ಸಲುವಾಗಿ ಬಂದವನು ನೀನೇ ಅಲ್ಲವೇ ? ಈಹೊತ್ತು ಯಾರಿಗೋ ಆಕೆಯನ್ನು ಕೊಡುವುದಾಗಿ ಹೇಳಿದ್ದೆ. ನಿನಗೇ ಅಲ್ಲವೇ ? "

" ಅಹುದು. "

ಕೆಲಹೊತ್ತಿನಲ್ಲಿ ಓಲಾನಳನ್ನು ಕರೆದು ತಂದರು ಆಕೆ ಸೀರವಾಗಿ ಉದ್ದವಾಗಿದ್ದಳು. ಪ್ಯಾಜಾಮೆ ತೊಟ್ಟಿದ್ದಳು. ಲುಂಗ ಆಕೆಯೆಡೆಗೆ ನೋಡಿದ ಆತನ ಎದೆ ಹೊಡೆದುಕೊಳ್ಳುತ್ತಿತ್ತು. ಈಕೆಯೇ ಆತನ ಹೆಂಡತಿ ಒಡತಿಯು " ಏ ದಾಸೀ ಇಲ್ಲಿ ಬಾ. ನೋಡು ಈತ ನಿನಗಾಗಿ ಬಂದಿರುವ ನೀನು ಹೋಗುವಿಯಲ್ಲವೇ ? "

" ಹೂಂ "

ಆಕೆ ಲುಂಗನ ಬದಿ ಬೆನ್ನು ಮಾಡಿ ನಿಂತಿದ್ದಳು. ಆತ ಮೋರೆ ನೋಡಿರಲಿಲ್ಲ. ಆಕೆಯ ದನಿ ಚೆನ್ನಾಗಿದೆಯೆಂದು ಭಾವಿಸಿದ. ಗುಣವೂ ಹಾಗೇ ಇರಬಹುದು. ಎಂದು ಯೋಚಿಸುತ್ತಿರುವಷ್ಟರಲ್ಲಿಯೇ ಒಡತಿಯು ಒಬ್ಬ ದಾಸಿಗೆ " ಈಕೆಯನ್ನು ಬಾಗಿಲ ವರೆಗೆ ಕಳಿಸಿ ಬಾ ಈ ಪೆಟ್ಟಿಗೆಯನ್ನು ತೆಗೆದುಕೋ

ಎಂದು ಹೇಳಿ ಲುಂಗನಿಗೆ " ನೀನು ಈಕೆಯ ಜೊತೆಗೆ ನಿಂತು ನಾನು ಹೇಳುವದನ್ನು ಕೇಳಿ. ಈಕೆ ಹನ್ನೆರಡು ವರ್ಷದವಳಿರುವಾಗ ಇಲ್ಲಿ ಬಂದಿದ್ದಳು. ಈಗ ಆಕೆಗೆ ಇಪ್ಪತ್ತು ವರ್ಷ ವಯಸ್ಸು. ಹಿಂದಿನ ಬರಗಾಲದಲ್ಲಿ ಈಕೆಯನ್ನು ಇವಳ ತಂದೆಯಿಂದ ಕೊಂಡಿದ್ದೆ. ಆಮೇಲೆ ಅವರ ಸುಳವೇ ಹತ್ತಲಿಲ್ಲ. ಈಕೆ ಗಟ್ಟಿಮುಟ್ಟಾಗಿದ್ದಾಳೆ. ಆಕೆ ನಿನ್ನ ಗದ್ದೆಯಲ್ಲಿ ದುಡಿಯುವಳು. ನೀರು ತಂದು ಹಾಕುವಳು. ಆಕೆ ಅಷ್ಟೇನೂ ಸುಂದರಿಯಲ್ಲ. ಆದರಿಂದೇನೂ ನಿನಗೆ ತೊಂದರೆ ಇಲ್ಲ. ಒಳ್ಳೆಯ ಗುಣದವಳೀಕೆ. ನೀನು ಹೇಳಿದಂತೆ ವರ್ತಿಸುವಳು. ಇವಳನ್ನು ಕರೆದುಕೊಂಡು ಹೋಗಿ ಚನ್ನಾಗಿ ನಡೆಸಿಕೋ. ಈಕೆ ಚನ್ನಾಗಿ ಅಡಿಗೆ ಮಾಡುತ್ತಾಳೆ. ಈಕೆಯನ್ನು ಬಿಟ್ಟಿರಲು ನನಗೆ ಮನಸ್ಸೇ ಬಾರದು " ಎಂದು ಹೇಳಿ ಓಲಾನಳಿಗೆ " ಈತನ ಆಜ್ಞೆ ಪಾಲಿಸು. ಮೊದಲಿಗ ಮಗ ಹುಟ್ಟಿದೊಡನೆ ಕರೆದುಕೊಂಡು ಬಾ " ಎಂದಳು.

" ಹೂಂ "

ಅವರಿಬ್ಬರಿಗೂ ಸಂಕೋಚವಾದುದರಿಂದ ಮಾತೇ ಹೊರಡಲಿಲ್ಲ.

" ಆಗಲಿ, ಹೋಗಿಬನ್ನಿ " ಎಂದಳು. ಲುಂಗನು ಆಕೆಗೆ ನಮಸ್ಕರಿಸಿ ಹೊರಬಿದ್ದ ಆತನ ಹಿಂದೆಂದೇ ಹೆಂಡತಿಯೂ ಹೊರಟಳು. ಲುಂಗ ತನ್ನ ಹೆಂಡತಿಯನ್ನು ನೋಡಿಕೊಂಡ ಮೋಗೆಯ ಮೇಲೇನೂ ಅವ್ಯಕ್ತನ ಕಲೆ ಇದ್ದಿರಲಿಲ್ಲ. ಬಾಯಿಯೂ ವಿಕಾರವಾಗಿ ತೆರೆದಿರಲಿಲ್ಲ. ಆತ ಕೊಟ್ಟ ಕುಡುಕು, ಉಂಗುರಗಳನ್ನು ಧರಿಸಿದ್ದಳು. ಆಕೆಯ ಕಣ್ಣಲ್ಲಿ ಸಂತೋಷ ತುಳುಕುತ್ತಿತ್ತು. ಆತ ಹೆಂಡತಿಗೆ " ಇದೋ ಪೆಟ್ಟಿಗೆ ನಾಗೂ ಬುಟ್ಟಿಯಿದೆ " ಎಂದ.

ಆಕೆ ಪೆಟ್ಟಿಗೆಯನ್ನೆತ್ತಹತ್ತಿದಳು. ಅದು ಭಾರವಾಗಿತ್ತು. ಆಗ ಲುಂಗ " ಪೆಟ್ಟಿಗೆಯನ್ನು ನಾನು ತೆಗೆದುಕೊಳುತ್ತೇನೆ. ಈ ಬುಟ್ಟಿಯನ್ನಷ್ಟು ನೀನು ತೆಗೆದುಕೋ " ಎಂದ.

ಅದರಂತೆಯೇ ಹೊತ್ತುಕೊಂಡರು. ಆತನಿಗೆ ಇನ್ನೂ ನೂರಾರು ಕೋಣೆ ದಾಟಬೇಕಲ್ಲ ಎಂದೆನಿಸಿತು. " ಬೇರೆ ಯಾವ ಹಾದಿಯೂ ಇಲ್ಲವೇನೇ ? "

ಆಕೆ ಒಳದಾರಿಯಿಂದ ಕರೆದುಕೊಂಡು ಹೋದಳು. ಆತ ಎರಡು ನೂರು ಜಾರಿ ಹೊರಳಿ ಆಕೆಯೊಡನೆ ನೋಡಿದ ಆಕೆ ಆತನಷ್ಟೇ ವೇಗವಾಗಿ

ನಡೆಯುತ್ತಿದ್ದಳು. ಪೇಟೆಗೆ ಹೋಗಿ ಕೆಲವು ಚಪಾತಿಯನ್ನು ತಂದುಕೊಟ್ಟ ಆಕೆ ಮಕ್ಕಳಂತೆ ಅವಸರವಸರವಾಗಿ ತಿನ್ನಹತ್ತಿದಳು.

ಹಾದಿಯಲ್ಲಿ "ಭೂದೇವಿಯ" ಮಂದಿರ ಬಂದಿತು. ಅದನ್ನು ಅವರಜ್ಜ ಕಟ್ಟಿಸಿದ್ದ. ಹೊರಗಿನ ಗೋಡೆಯ ಮೇಲೆ ಎಷ್ಟೋ ಚಿತ್ರ ತೆಗೆದದ್ದಿತ್ತು. ಆದರೆ ಈಗ ಅದು ಮಳೆಯಿಂದ ತೊಯ್ದು ಬರೀ ಗೆರೆ ಮಾತ್ರ ಉಳಿದಿತ್ತು. ದೇವಸ್ಥಾನದಲ್ಲಿ ಎರಡು ಮೂರ್ತಿ ಇತ್ತು. ವರುಷವರುಷವೂ ಕೆಂಪು ಕಾಗದದಿಂದ ವೆಂಗನ ತಂದೆಯು ಸೀರೆ ಮಾಡಿ ಉಡಿಸುತ್ತಿದ್ದ. ಮೂರ್ತಿಗೆ ಉಡಿಸಿದ ವಸ್ತ್ರ ಹೊಸದಾಗಿತ್ತು. ಯಾಕಂದರೆ ಹೊಸ ವರ್ಷ ಆರಂಭವಾಗಿ ಕೆಲವೇ ದಿನ ಕಳೆದಿತ್ತು. ಗಂಡ ಹೆಂಡಿರಿಬ್ಬರೂ ಊದಬತ್ತಿ ಹಚ್ಚಿ, ಮೌನವಾಗಿ ತಿರಬಾಗಿ ನಿಂತರು.

ಸಂಜೆಯಾಗುವುದರಲ್ಲಿತ್ತು. ಲುಂಗ ಪೆಟ್ಟಿಗೆ ಹೊತ್ತು, ಮನೆಯ ಹಾದಿ ಹಿಡಿದ ತಂದೆ ಮುಳುಗುತ್ತಿರುವ ಸೂರ್ಯನ ಎಳೆ ಬಿಸಿಲಲ್ಲಿ ದೇಹವನ್ನು ಕಾಸುತ್ತಿದ್ದ. ಅವರಿಬ್ಬರನ್ನೂ ನೋಡಿದ. ಆದರೆ ಏನೂ ಹೇಳಲಿಲ್ಲ. ಆತ ಮೋಡಗಳನ್ನೇ ನೋಡುತ್ತಿದ್ದ "ಇಂದಿನ ರೀತಿ ನೋಡಿದರೆ ಮಳೆಯಾಗಲೇಬೇಕು." ಎಂದು ಮಗನಿಗೆ "ನೀನೆಲ್ಲ ದುಡ್ಡು ನೀರು ಮಾಡಿಬಿಟ್ಟೆ" ಎಂದ.

"ಇಲ್ಲ. ಇಂದು ಸಂಜೆ ಕೆಲ ಅತಿಥಿಗಳು ಬರತಕ್ಕವರಿದ್ದಾರೆ ಎಂದು ಪೆಟ್ಟಿಗೆಯನ್ನೆತ್ತಿ ಮಲಗುವ ಕೋಣೆಯಲ್ಲಿಟ್ಟ

ವೆಂಗನಿಗೆ ಅತಿಥಿಗಳು ಬರುತ್ತಾರೆಂಬುದನ್ನು ಕೇಳಿ ಸಂತೋಷವೇ ಆಗಿತ್ತು. ಆದರೂ ಹೊಸದಾಗಿ ಬಂದ ಹೆಂಡತಿ ಸಿಕ್ಕಾಬಟ್ಟೆ ಖರ್ಚು ಮಾಡಬಾರದೆಂದು ಆ ರೀತಿ ದೂರಿದ್ದ. ಲುಂಗನು ತಂದೆಗೇನೂ ಉತ್ತರ ಹೇಳದೆ. "ಇದು ನೋಡು, ಹಿಟ್ಟು ಹಾಗೂ ಮೀನ ತಂದಿದ್ದೇನೆ. ಏಳು ಮಂದಿ ಬಂದಾರು. ಅಷ್ಟೊಂದು ಮಂದಿಗೆ ಅಡಿಗೆ ಮಾಡಿ ಹಾಕಬಹುದಲ್ಲವೇ ?"

"ನಾನು ಅಡಿಗೆ ಮಾಡಿಯೇ ಬೆಳೆದವಳು. ಇಂತಹ ಅಡಿಗೆ ದಿನಾಲು ಮಾಡುತ್ತಿದ್ದೆ." ಎಂದಳು. ಲುಂಗನು ಅತಿಥಿಗಳನ್ನು ಕರೆದುಕೊಂಡು ಬಂದ. ಎಲ್ಲರೂ ಕೈಕಾಲು ತೊಳೆದು ಒಳಕ್ಕೆ ಬಂದರು. ಎಲೆ ಹಾಕಿದ್ದಿತ್ತು. ಬಡಿಸಲು ಹೆಂಡತಿಗೆ ಹೇಳಲು ಒಳಗೆ ಬಂದನು.

" ನಾನೆಲ್ಲ ಬಡಿಸಿ ತಯಾರು ಮಾಡಿಡುವೆ. ನೀವು ಅದನ್ನು ತೆಗೆದುಕೊಂಡು ಹೋದರಾಯಿತು. " ಎಂದಳು.

ಲುಂಗನಿಗೆ ತನ್ನ ಹೆಂಡತಿಯ ಗುಣವನ್ನು ಕಂಡು ಮುಗ್ಧನಾದ. ತನ್ನ ಮುಂದೆ ಸಂಕೋಚವಿಲ್ಲದೆ ಮಾತನಾಡುತ್ತಿರುವವಳು ಇತರರ ಮುಂದೆ ಹೊರಬೀಳುವದಿಲ್ಲವೆಂಬುದನ್ನು ಅರಿತು ಹೆಮ್ಮೆಪಟ್ಟುಕೊಂಡ. ಬಡಿಸಿದ ಥಾಲಿಯನ್ನು ತೆಗೆದುಕೊಂಡು ಅವರ ಎಲೆಯಲ್ಲಿ ಬಡಿಸಿ " ತಾವು ಈಗ ಊಟ ಮಾಡಬೇಕೆಂದು ಬೇಡಿಕೊಂಡ.

ಅವರ ಚಿಗಪ್ಪ ತುಸು ವಿನೋದಶೀಲ. " ಏನಪ್ಪಾ, ನಿನ್ನ ಹೆಂಡತಿ ನಮಗೆ ಮೋರೆ ತೋರಿಸದಿದ್ದಂತೆ ವ್ಯವಸ್ಥೆ ಮಾಡಿರುವೆಯಾ ? "

" ನಾವಿಬ್ಬರೂ ಒಂದುಗೂಡಿಲ್ಲ. ಅಂದ ಬಳಿಕ ಹೆರವರಿಗೆ ಮೋರೆ ತೋರುವುದು ಹೇಗೆ ? "

ಎಲ್ಲರೂ ಉಂಡರು. ಅಡಿಗೆ ಸ್ವಾದಿಷ್ಟವಾಗಿತ್ತು. ಎಲ್ಲರೂ ಹೋದ ಬಳಿಕ ತನ್ನ ಕೋಣೆಯಲ್ಲಿ ಹೋದ. ಆದರೆ ಒಬ್ಬನಿಗೇ ಹೆಂಡತಿಯ ಜೊತೆಗಿರಲು ನಾಚಿಕೆಯೆನಿಸಹತ್ತಿತು. ಮಲಗಲು ಬಟ್ಟೆ ಬದಲಿಸಹತ್ತಿದ. ಹೆಂಡತಿಯು ಪರಥೆಯ ಮರೆಗೆ ಹೋಗಿ ಮಲಗುವ ಸಿದ್ಧತೆ ಮಾಡಹತ್ತಿದಳು.

" ದೀಪ ಆರಿಸಿ ಮಲಗು " ಎಂದು ಹೇಳಿ ಮಲಗಿದ. ಆದರೆ ನಿದ್ದೆ ಹತ್ತಿರಲಿಲ್ಲ. ಕೆಲಹೊತ್ತಿನಲ್ಲಿ ದೀಪ ನಂದಿತು. ಓಲಾನಳು ಬಂದು ಮಲಗಿದಳು. ಶರೀರದಲ್ಲೆಲ್ಲ ಆನಂದದ ವಿದ್ಯುತ್ತು ಸಂಚಾರವಾದಂತಾಯಿತು.

—

ವೆಂಗಲುಂಗನ ಜೀವನ ಸುಖಮಯವಾಗಿ ಸಾಗಿತ್ತು. ಮೂರನೇ ದಿನ ಹಾಸಿಗೆಯಲ್ಲಿರುವಾಗಲೇ ಹೆಂಡತಿಯು ಎಚ್ಚತ್ತಿದ್ದಳು. ಉಷೆಯ ಅರುಣ ಕಿರಣದ ಜೊತೆಗೆ ಮುದುಕನ ಕೆಮ್ಮಿನ ದನಿ ಕೇಳಹತ್ತಿತು.

" ನನ್ನ ತಂದೆಗಾಗಿ ಒಂದು ಥಾಲಿ ನೀರು ಕಾಸಿಕೊಡು " ಎಂದು ಹೆಂಡತಿಗೆ ಹೇಳಿದ.

" ಚಹಾ ಮಾಡಲೇ ? "

" ಚಹಾ ಕುಡಿಯುದಷ್ಟು ತಾನೇನು ಬಡವರಲ್ಲ. ಹೂಂ. ಚಹಾ ಮಾಡು " ಎಂದು ಹೇಳಬೇಕೆಂದು ಬಯಸಿದ. ಆದರೆ ತಂದೆ ಸಿಟ್ಟಾದಾನೆಂದು ತಿಳಿದು " ಬೇಡ ಚಹಾದಿಂದ ತಂದೆಯ ಕೆಮ್ಮು ಹೆಚ್ಚಾಗುತ್ತಿದೆ. " ಎಂದ.

ಆತ ಸಮಾಧಾನದ ಉಸಿರನ್ನೆಳೆದು ಹಾಗೇ ಮಂಚದ ಮೇಲೆ ಒರಗಿದ. ಆತನ ಹೆಂಡತಿ ನೀರು ಕಾಯಿಸುತ್ತಿದ್ದಳು. ಇನ್ನೂ ನಾಚಿಕೆ ತೊಲಗಿರಲಿಲ್ಲ. ತನ್ನ ಹೆಂಡತಿ ತನ್ನನ್ನು ಮೆಚ್ಚುತ್ತಾಳೋ ಇಲ್ಲವೋ ಎಂಬ ಶಂಕೆ ಬಂದಿತ್ತು.

ಅಷ್ಟರಲ್ಲಿ ಹೆಂಡತಿ ಒಳಗೆ ಬಂದಳು. ಆಕೆಯ ಎರಡೂ ಕೈಯಲ್ಲಿ ಬಿಸಿ ನೀರಿನ ಥಾಲಿ ಇತ್ತು. ಆತ ಹಾಸಿಗೆಯ ಮೇಲೆ ಎದ್ದು ಕುಳಿತು ಥಾಲಿ ತೆಗೆದುಕೊಂಡ, ಅದರಲ್ಲಿ ಚಹಾ ಸೊಪ್ಪು ತೇಲುತ್ತಿತ್ತು. ಲುಂಗ ಆಕೆಯನ್ನು ದಿಟ್ಟಿಸಿದ. ಆಕೆ ಅಂಜಿ " ಮಾವನಿಗೆ ನೀರೇ ಕೊಟ್ಟಿದ್ದೆ. ನಿಮಗಾಗಿ ಚಹಾ ತಂದಿರುವೆ " ಎಂದಳು.

ಆತ ಸಂತೋಷದಿಂದ ಚಹಾ ಕುಡಿಯಹತ್ತಿದ. ಹೆಂಡತಿಯು ತನ್ನನ್ನು ಪ್ರೀತಿಸುತ್ತಾಳೆಂದು ತಿಳಿದುಕೊಂಡ.

ಮೂರು ತಿಂಗಳು ಕಳೆಯಿತು. ಈ ದಿನಗಳನ್ನೆಲ್ಲ ಆತ ಕ್ಷಣದಂತೆ ಕಳೆದ. ಆತ ಎಂದಿನಂತೆ ಕೆಲಸ ಮಾಡುತ್ತಿದ್ದ. ಆದರೆ ದಣುವಿನ ಜೊತೆಗೆ ಆನಂದವನ್ನೂ ಅನುಭವಿಸುತ್ತಿದ್ದ. ನಸುಕಿನಿಂದ ಮಧ್ಯಾನ್ಹದವರೆಗೆ ದುಡಿದು ಮನೆಗೆ ಹೋದಾಗ ಊಟ ತಯಾರಾಗಿರುತ್ತಿತ್ತು. ಮೊದಲು ದಣಿದು ಹೋದ ಮೇಲೆ, ತಾನೇ ತಯಾರಿಸಿಕೊಳ್ಳಬೇಕಾಗುತ್ತಿತ್ತು. ಈಗ ಬಂದೊಡನೆಯೇ ಬಿಸಿ ಬಿಸಿ ಅನ್ನ ಬಡಿಸಿರುತ್ತಿತ್ತು. ಮನೆ ಜಳ ಜಳ ಉಡುಗಿದ್ದಿರುತ್ತಿತ್ತು. ಕಟ್ಟಿಗೆಯೆಲ್ಲ ಒಡೆದು ಅಣಿಯಾಗಿರುತ್ತಿತ್ತು. ಗಂಡ ನ್ಯಾರಿ ತೀರಿಸಿ ಕೆಲಸಕ್ಕೆ ಹೊದೊಡನೆಯೇ ತಾನೂ ಹೊರಗೆ ಹೋಗಿ ಉರುವಲವನ್ನೋ, ಸೊಪ್ಪುಸದೆಯನ್ನೋ ತರುತ್ತಿದ್ದಳು. ಈಗ ಕಟ್ಟಿಗೆಗೂ ದುಡ್ಡು ತೆರಬೇಕಾದುದಿರಲಿಲ್ಲ. ಬೀದಿಯಲ್ಲಿ ಹೋಗಿ ದನದ ಸೆಗಣಿ ತಂದು ರಾಶಿ ಹಾಕಿ ಬೆರಣಿ ಮಾಡುತ್ತಿದ್ದಳು ದಿನಾಲು ಆಕೆ ಒಂದಲ್ಲ ಒಂದು ಕೆಲಸದಲ್ಲಿ ತೊಡಗಿರುತ್ತಿದ್ದಳು. ಮನೆಯೆಲ್ಲ ಸಾರಣೆ ಕಾರಣೆ ಕಾಣುತ್ತಿದ್ದಿತು. ಹಸನಾಗಿರುತ್ತಿತ್ತು. ಮುದುಕನ ಕೆಮ್ಮು ಕಡಿಮೆಯಾಗಿತ್ತು ಬಿಸಿಲಿಗೆ ಚಳಿಕಾಸುತ್ತ ಕೂತಿರುತ್ತಿದ್ದ.

ಓಲಾನಳು ಅವಶ್ಯಕತೆಯ ಹೊರತು ಮಾತಾಡುತ್ತಿರಲಿಲ್ಲ. ಹಗಲಿನಲ್ಲೆಲ್ಲ ಕೆಲಸ ಮಾಡುವುದನ್ನು ಕಂಡು ವೆಂಗಲುಂಗ ಸಂತೋಷಪಡುತ್ತಿದ್ದ. ರಾತ್ರಿಯಲ್ಲಿ ಶರೀರ ಸೌಖ್ಯಕ್ಕೂ ಕೊರತೆ ಇರಲಿಲ್ಲ. ಹಗಲು ನೀನೇಕೆ

ಮಾತಾಡುತ್ತಿರುವದಿಲ್ಲ. ಎಂದು ಕೇಳಲು ಬಯಸುತ್ತಿದ್ದ. ಆದರೆ ಸಾಧ್ಯವಾಗುತ್ತಿರಲಿಲ್ಲ. ಹೊಲದಲ್ಲಿ ಕೆಲಸ ಮಾಡುತ್ತಿರುವಾಗಲೂ ಒಮ್ಮೊಮ್ಮೆ ಆಕೆಯ ನೆನಪು ಸುಳಿದು ಹೋಗುತ್ತಿತ್ತು.

ಕೆಲಸದಲ್ಲಿಯೇ ರಾತ್ರಿ ಹಗಲು ಮಾಡಿದಾಕೆಗೆ ಇದೊಂದು ಕೆಲಸವೆಂದೇ ಅನಿಸುತ್ತಿರಲಿಲ್ಲ. ಹೆಚ್ಚೆಂದರೆ ಎರಡು ಮೂರು ಕೋಣೆಯನ್ನು ಉಡುಗಿ, ಅಡಿಗೆ ಮಾಡುವುದು—ಇಲ್ಲಿದ್ದ ಕೆಲಸ ಒಂದು ದಿನ ಆಕೆ ಮನೆಯಲ್ಲೇನೂ ಕೆಲಸವಿಲ್ಲೆಂದು ತಿಳಿದು ಗಂಡನ ಕೆಲಸದಲ್ಲಿ ನೆರವಾಗಲ ಗದ್ದೆಗೇ ಹೋಗಿ ಮುಟ್ಟಿದಳು.

ಆಗ ತಾನೇ ಬೇಸಿಗೆಯ ಪ್ರಾರಂಭ. ಸೂರ್ಯನ ಉಷ್ಣತೆಯಿಂದ ಬೆವರು ಸುರಿಯುತ್ತಿತ್ತು. ವೆಂಗಲುಂಗನು ತನ್ನ ಅಂಗಿಯನ್ನು ಕಳಚಿ ಕೆಲಸ ಮಾಡುತ್ತಿದ. ಆದರೆ ಓಲಾನಳು ತೆಳ್ಳನ್ನ ಸೀರೆಯೊಂದನ್ನು ಸುತ್ತಿಕೊಂಡು ಕೆಲಸದಲ್ಲಿ ಮಗ್ನಳಾಗಿದ್ದಳು. ಬೆವರಿನಿಂದ ಸೀರೆಯೆಲ್ಲ ಒದ್ದೆಯಾಗಿ ಮೈಗೆ ಅಂಟಿಕೊಂಡಿತ್ತು. ಈಗಂತೂ ಆಕಾರಕ್ಕೆ ಮೂರೇ ಬೆರಳುಳಿದಿತ್ತು ಸೂರ್ಯಾಸ್ತವಾದ ಬಳಿಕ ಆತ ಹೆಂಡತಿಯೆಡೆಗೆ ನೋಡಿದ. ಆಕೆ ನೆಲದ ಮಣ್ಣಿನಂತೆ ಕಪ್ಪಾಗಿದ್ದಳು. ಆಗಲೇ ಆಕೆ ತನ್ನ ಗಂಡನಿಗೆ ಎಂದಿನಂತೆ ಸ್ಪಷ್ಟವಾಗಿ " ನಾನು ಗರ್ಭವತಿಯಾಗಿದ್ದೇನೆ " ಎಂದಳು.

ವೆಂಗಲುಂಗನಿಗೆ ಏನೆನ್ನಬೇಕೋ ತಿಳಿಯದಾಯಿತು. ಕಡವರವನೆಡಹಿ ಸಂಧಿಸಿದ ಕಡು ಬಡವನಂತೆ ಆತನ ಸ್ಥಿತಿಯೆನಿಸಿತು. ಆಕೆಗೇನೂ ಹೆಚ್ಚು ಕಷ್ಟವಾದಂತೆ ಕಂಡುಬರಲಿಲ್ಲ. ಆತ " ಇದನ್ನು ನಮ್ಮ ತಂದೆಗೆ ತಿಳಿಸೋಣ " ಎಂದ.

ಲುಂಗ ಮುಂದಾದ. ಓಲಾನಳು ಆತನನ್ನು ಅನುಸರಿಸಿದಳು. ಮುದುಕ ರಾತ್ರಿಯ ಊಟಕ್ಕಾಗಿ ಆತುರನಾಗಿದ್ದ. " ನನ್ನ ವಯಸ್ಸಾಯಿತು. ಇಷ್ಟು ಹೊತ್ತು ಊಟವಿಲ್ಲದೆ ಹೇಗೆ ತಾಳಲಿ ? " ಎಂದು ಕೇಳಿದ.

ಆಮೇಲೆ ಲುಂಗನು ಹೆಂಡತಿ ಗರ್ಭಿಣಿಯಾದ ಸುದ್ದಿ ತಿಳಿಸಿದ. ಮುದುಕನಿಗೆ ತುಂಬಾ ಸಂತೋಷವಾಯಿತು.

೩

ಪ್ರಸವಕಾಲ ಸಮೀಪಿಸ ಹತ್ತಲು ಲುಂಗನು ಹೆಂಡತಿಯನ್ನು ಕರೆದು "ನಿನ್ನ ಪ್ರಸವಕಾಲಕ್ಕೆ ಬೇರೆ ಯಾವುದಾದರೊಂದು ಹೆಂಗಸು ಹತ್ತಿರಿದ್ದರೆ ಒಳಿತಲ್ಲವೇ" ಎಂದ. ಓಲಾನಳು 'ಬೇರಾರೂ ಬೇಡ' ಎಂದಳು.

"ನಮ್ಮ ತಾಯಿ ಇರುವಾಗ ಹಳ್ಳಿಯಿಂದ ಒಬ್ಬ ಹೆಂಗಸನ್ನು ತಂದಿದ್ದರು. ಹ್ವಾಂಗ ಮಂದಿರದಲ್ಲಿ ನಿನ್ನ ಗೆಳತಿಯರಲ್ಲಿ ಇನ್ನಾರೂ ಇಲ್ಲವೆ?"

"ಇಲ್ಲ, ಅಲ್ಲಿ ಯಾರ್ಯಾರೂ ಇಲ್ಲ."

"ಆದರೆ ಇಲ್ಲಿ ಇದ್ದವರೆಂದರೆ ನಾವಿಬ್ಬರೇ ಗಂಡಸರು. ಪ್ರಸವಕಾಲದ ಯಾವ ಮಾಹಿತಿಯೂ ನಮಗಿಲ್ಲ. ನಿನ್ನ ಕೋಣೆಯಲ್ಲಿ ನನ್ನ ತಂದೆಯಂತೂ ಹೋಗಲಾರ. ನಾನಂತೂ ಆಕಳು ಹಡೆದದ್ದನ್ನು ಸಹ ಕಂಡಿಲ್ಲ. ನನ್ನ ಕಲ್ಲಿನಂತಹ ಕೈಯಿಂದ ಮಗುವಿಗೆ ನೋವೇ ಆದೀತು. ಅದಕ್ಕಾಗಿ ನಿನ್ನ ಗುರುತಿನವರಾರಾದರೂ—

"ನನ್ನ ಮಗುವನ್ನು ಎತ್ತಿಕೊಂಡೇ ಅವರ ಮನೆಗೆ ಹೋಗುವೆ. ಅದರ ಮೊದಲೆಂದೂ ಹೋಗೆನು. ನನ್ನ ಕಂದಮ್ಮನಿಗೆ ಕೆಂಪು ಕುಲಾಯಿ ತೊಡಿಸಿ ಬಣ್ಣ ಬಣ್ಣದ ಪಾಜಾಮೆಯನ್ನುಡಿಸಿ ಕರೆದುಕೊಂಡು ಹೋಗುವೆ. ಕುಲಾಯಿಗೆ ಬುದ್ಧನ ಪ್ರತಿಮೆಯ ಸಿಕ್ಕೆಯನ್ನು ತೂಗಹಾಕುವೆ. ಕಾಲಿಗೆ ಅಂದದ ಚಪ್ಪಲಿ ಮಾಡಿಸುವೆ. ನಾನೂ ಅಂತಹದೇ ಸೊಬಗಿನ ಉಡುಪು ತೊಡುವೆ. ಆಮೇಲೆ ದಾಸಿಯಂತೆ ದುಡಿದ-ಹುಕ್ಕಾ ಸೇದುತ್ತಿರುವ ಯಜಮಾನತಿಯ ಮಂದಿರದಲ್ಲಿ ಕಾಲಿಡುವೆ. ನನ್ನ ಕಂದಮ್ಮನನ್ನು ಹೆಮ್ಮೆಯಿಂದ ಎಲ್ಲೆಡೆಯಲ್ಲಿಯೂ ಎತ್ತಿ ತೋರಿಸುವೆ."

ಲುಂಗನು ಹೆಂಡತಿಯ ಬಾಯಿಂದ ಹಿಂದೆಂದೂ ಇಂತಹ ಮಾತು ಕೇಳಿರಲಿಲ್ಲ. "ಹಾಗಾದರೆ ನಿನಗೆ ಕೆಲವು ರೂಪಾಯಿ ಬೇಕಾಗಲಿಕ್ಕಿಲ್ಲವೇ?"

"ಹೌದು. ನನಗೆ ಮೂರು ಬೆಳ್ಳಿಯ ನಾಣ್ಯಗಳಿದ್ದರೆ ಹೆಚ್ಚಾಯಿತು. ನಾನೆಲ್ಲ ಲೆಖ್ಖ ಹಾಕಿಟ್ಟಿರುವೆ."

ಆತನ ಹತ್ತರ-ವೊನ್ನೆಯೇ ಹುಲ್ಲು ಮಾರಿ ಬಂದ ಹಣವಿತ್ತು. ಆತ ನಾಲ್ಕು ಬೆಳ್ಳಿಯ ನಾಣ್ಯಗಳನ್ನು ಕೊಟ್ಟು "ಆತನಿಗೊಂದು ರೇಶಿಮೆಯ ಕೋಟನ್ನು ಹೊಲಿಸು. ಎಷ್ಟೆಂದರೂ ಆತ ಚೊಚ್ಚಿಲಮಗು."

"ಇದೇ ಮೊದಲಿನ ಸಲ. ನಾನು ಬೆಳ್ಳಿಯ ನಾಣ್ಯವನ್ನು ಕೈಯಲ್ಲಿ ಹಿಡಿದದ್ದು" ಎಂದು ಹೇಳಿ ಲಗುಬಗೆಯಿಂದ ತನ್ನ ಕೋಣೆಗೆ ಹೋದಳು.

ಓಲಾನಳು ಪ್ರಸವದ ದಿನ ಯಾರನ್ನೂ ಕರೆಯಿಸಲಿಲ್ಲ. ಸಾಯಂಕಾಲ ಸೂರ್ಯ ಮುಳುಗುವ ಮುನ್ನ ಒಂದು ಘಟಣೆ ನಡೆಯಿತು. ಆ ದಿನ ಗದ್ದೆಯಲ್ಲಿ ಅವರಿಬ್ಬರೂ ಧಾನ್ಯ ಕೊಯ್ಯುತ್ತಿದ್ದರು. ಆಗಲೇ ವೇದನೆಯ ಚಿನ್ಹ ಕಾಣಹತ್ತಿತು. ಮೋರೆ ಬಸವಳಿದು ಬೆವರಿಟ್ಟಿತ್ತು.

ಅಂತೂ ಬೇಗನೇ ಮನೆಗೆ ಬಂದರು. ಅಂತಹ ವೇದನೆಯಲ್ಲೇ ಊಟಕ್ಕೆಲ್ಲ ಅಣಿಮಾಡಿದ್ದಳು. ಇನ್ನೊಂದು ಹೊರೆ ತರಲು ಲುಂಗ ಗದ್ದೆಗೆ ಹೋಗಿದ್ದ. ಬಂದೊಡನೆಯೇ 'ಇಂತಹ ಕಾಲದಲ್ಲಿಯೂ ಕೆಲಸ ಮಾಡಿದಳಲ್ಲ.' ಎಂದು ಆಶ್ಚರ್ಯವೂ ಹೆಮ್ಮೆಯೂ ಉಂಟಾಯಿತು. ಆಗಲೇ ಆಕೆಗೆ ವೇದನೆ ಶುರುವಾಗಿತ್ತು. ಲುಂಗನ ಹೃದಯದಲ್ಲಿ ಕಾತರತೆ ಒಡಮೂಡಿತ್ತು.

"ಬಾರಪ್ಪಾ, ಬಾ. ಊಟಮಾಡಿ ಹೋಗು. ಅಡಿಗೆಯೆಲ್ಲ ಆರಿಹೋದೀತು. ನನಗೆ ಮೊದಲನೇ ಹುಡುಗ ಹುಟ್ಟುವಾಗ ಪ್ರಸವ ವೇದನೆ ಇಡೀ ದಿನ ಉಂಟಾಗಿತ್ತು. ನಿನ್ನ ತಾಯಿ ಹಡೆದದ್ದು ಇಪ್ಪತ್ತು. ಅದರಲ್ಲಿ ಉಳಿದವನೆಂದರೆ ನೀನೊಬ್ಬನೇ.

"ಅಂತೂ ನಾಳೆ ನಾನೊಬ್ಬ ಅಜ್ಜ ಆಗಿಬಿಡುತ್ತೇನೆ." ಎಂದು ಲುಂಗನ ತಂದೆಯೆಂದ.

ವೆಂಗಲುಂಗನು ಬಾಗಿಲಲ್ಲಿ ನಿಂತು ಹೆಂಡತಿಯು ಬಿಸುಸುಯ್ಯುವುದನ್ನು ಕೇಳುತ್ತಿದ್ದ. ಕೊನೆಗೆ ವೇದನೆ ಹೆಚ್ಚಾಗಹತ್ತಿತು. ಇನ್ನೇನು ಒಳಗೆ ನುಗ್ಗಬೇಕೆಂದು ಧಾವಿಸುತ್ತಿರುವಷ್ಟರಲ್ಲಿಯೇ ಅಳುವ ದನಿ ಕೇಳಿಸಿತು.

ಈಗ ಆತನಿಗೆ ಹೆಂಡತಿಯ ಎಚ್ಚರವುಳಿಯಲಿಲ್ಲ. ಹುಟ್ಟಿದ್ದು ಹೆಣ್ಣೋ ಗಂಡೋ ಎಂದು ತಿಳಿಯುವ ಆತುರ. "ಹುಟ್ಟಿದ್ದು ಗಂಡೆಂ"ದು ಕೆಲಹೊತ್ತಿನಲ್ಲಿಯೇ ತಿಳಿದುಬಂತು.

ಲುಂಗ ಸಮಾಧಾನದ ಉಸಿರನ್ನೆಳೆದು ತಾಟಿನ ಮುಂದೆ ಹೋಗಿ ಕುಳಿತ. ಅನ್ನವೆಲ್ಲ ತಂಗಳಾಗಿತ್ತು. ಮುದುಕ ಬೆಂಚಿನ ಮೇಲೆ ನಿದ್ದೆ ಹೋಗಿದ್ದ. ಆತನನೆಬ್ಬಿಸಿ "ಅಪ್ಪಾ ನೀನು ಇಂದಿನಿಂದ ಅಜ್ಜನಾದೆ. ನಾನು ಮಗನ ತಂದೆಯಾದೆ" ಎಂದ.

ಹೇಗೋ ಆ ಆರಿದ ಅನ್ನವನ್ನೇ ತಿಂದು ಕೋಣೆಯ ಬಳಿ ಹೋದ. ಮಗುವು ಸುಮ್ಮನೆ ಬಿದ್ದಿತ್ತು. ರಕ್ತದ ವಾಸನೆ ಇತ್ತಾದರೂ ರಕ್ತವಿರಲಿಲ್ಲ. ಎಲ್ಲವನ್ನೂ ಓಲಾನಳು ಸ್ವಚ್ಛ ಮಾಡಿದ್ದಳು. ಅದನ್ನೆಲ್ಲ ಕಟ್ಟಿಗೆಯ ಪಾತ್ರೆಯೊಂದರಲ್ಲಿ ತುಂಬಿಡಲಾಗಿತ್ತು. ಕೆಂಪು ಮೇಣಬತ್ತಿಯನ್ನು ಹಚ್ಚಿಟ್ಟಿದ್ದಳು. ಹೊಸ ಬಟ್ಟೆಯೊಂದನ್ನು ಹೊದೆದು ಆಕೆ ಅಡ್ಡಾಗಿದ್ದಳು. ಇನ್ನೂ ವೇದನೆ ಹೋಗಿರಲಿಲ್ಲ. ಕೂದಲೆಲ್ಲ ಬೆವರುನಲ್ಲಿ ಒದ್ದೆಯಾಗಿತ್ತು.

"ನಾಳೆ ಅರ್ಧ ಸೇರು ಬೆಲ್ಲ ತಂದು ಕುದಿಯುವ ನೀರಲ್ಲಿ ಬೆರಸಿ ಕೊಡುವೆ. ಊರವರಿಗೆಲ್ಲ ರೊಟ್ಟಿಯನ್ನು ತಂದು ಔತಣ ಕೊಡುವೆ" ಎಂದ.

೪

ಮೂರನೇ ದಿನವೇ ಎಂದಿನಂತೆ ಓಲಾನಳು ಅಡಿಗೆ ತಯಾರಿಸಿದಳು. ಆಕೆ ಗದ್ದೆಗೆ ಹೋಗುವಂತಿರಲಿಲ್ಲ. ವೆಂಗಲುಂಗನೊಬ್ಬನೇ ದುಡಿದ. ಆ ಮೇಲೆ ಬಟ್ಟೆ ಬದಲಿಸಿ ೫೦ ರೊಟ್ಟಿಗಳನ್ನು ಕೊಂಡುತಂದ. ರೊಟ್ಟಿಗಳು ತಾಜಾ ಅಲ್ಲದಿದ್ದರೂ ಕೆಟ್ಟಿರಲಿಲ್ಲ. ಅದರ ಬೆಲೆ ಹೆಚ್ಚೇನೂ ಇರಲಿಲ್ಲ. ಅಲ್ಲಿಂದಾತ ಮಿಠಾಯಿಯ ಅಂಗಡಿಗೆ ಹೋಗಿ ಅರ್ಧಸೇರಿನಷ್ಟು ಮಿಠಾಯಿ ಕೊಂಡ. "ನಿಮ್ಮಲ್ಲಾರು ಹಡೆದಿದ್ದಾರಯೋ" ಎಂದು ಅಂಗಡಿಕಾರ ಕೇಳಿದ "ಹೌದು. ಚೊಚ್ಚಿಲ ಮಗು ಹುಟ್ಟಿದೆ" ಎಂದು ಅಭಿಮಾನದಿಂದ ಉಸುರಿದ.

ಅಲ್ಲಿಂದ ಹೊರಟು ಸುಗಂಧ ದ್ರವ್ಯಗಳನ್ನು ಕೊಂಡು ಭೂದೇವಿಯ ಗುಡಿಗೆ ಹೋಗಿ ದೀಪ ಹಚ್ಚಿ ಮನೆಗೆ ಮರಳಿದ.

ಓಲಾನಳು ಗದ್ದೆಯ ಕೆಲಸಕ್ಕೆ ಹೋಗಲು ಆರಂಭಿಸಿದಳು. ಕುತ್ರಿ ಒಣಗಿತ್ತು. ಭತ್ತ ಬೇರೆ ಮಾಡಿದುದಾಯಿತು. ಗೋದಿ ಬಿತ್ತನೆಯ ಕೆಲಸ ಸುರುವಾಯಿತು. ನೆಲ ಹೂಳಿ ಹೆಂಟೆ ಒಡೆದು ಬೀಜ ಹಾಕಿದರು. ಆಕೆ ಹಗಲೆಲ್ಲ ಹೊಲದಲ್ಲಿ ದುಡಿಯುತ್ತಿದ್ದಳು. ಮಗು ಹರಕು ಚಾಪೆಯ ಮೇಲೆ ಬಿದ್ದಿರುತ್ತಿತ್ತು. ಮಧ್ಯದಲ್ಲಿ ಆತ್ತಾಗ ತಾಯಿ ಎತ್ತಿಕೊಂಡು ಮೊಲೆ ಕೊಡುತ್ತಿದ್ದಳು.

ಚಳಿಗಾಲ ಬಂದಿತು, ಆದಕ್ಕೆ ಎಲ್ಲ ರೀತಿಯ ಸನ್ನಾಹವನ್ನೂ ಮಾಡಿದ್ದರು. ಹಿಂದೆಂದೂ ಇಂತಹ ಬೆಳೆ ಬಂದಿರಲಿಲ್ಲ. ಎಲ್ಲ ಕಣಜಗಳೂ ಧಾನ್ಯ

ದಿಂದ ತುಂಬಿದ್ದವು. ಇದರಿಂದ ಬಹಳಷ್ಟು ಹಣ ಬಂದೀತು. ಆದರೂ ವೆಂಗಲುಂಗ ಮಿತವ್ಯಯಿಯಾಗಿದ್ದ. ಇತರರಂತೆ ಕುಡಿಯುವ ಚಟವಿರ ಲಿಲ್ಲ. ಜುಗಾರಿ ಆಡುತ್ತಿರಲಿಲ್ಲ. ಊಟ ಉಡಿಗೆಯಲ್ಲೂ ವಿಶೇಷ ಆಡಂಬರ ವಿರಲಿಲ್ಲ. ಆತ ಧಾನ್ಯವನ್ನೆಲ್ಲ ಕಾದಿಟ್ಟು ತುಟ್ಟಿಯಾದಾಗ ಮಾರುತ್ತಿದ್ದ. ವೆಂಗಲುಂಗನ ಚಿಗಪ್ಪನಂತೂ ಸಾಲಕ್ಕಾಗಿ ಮೊದಲೇ ಮಾರುತ್ತಿದ್ದ.

ಓಲಾನಳು ತಮಗೆಲ್ಲ ಮೊಚ್ಚೆಗಳನ್ನು ಹೊಲಿದಳು. ಮುಂದೆ ಬೇಕಾಗ ಬಹುದಾದ ನಂಜುವ ಸಾಮಗ್ರಿಗಳನ್ನೆಲ್ಲ ಈಗಿನಿಂದಲೇ ತಯಾರಿಸಿಕೊಂಡಿ ದ್ದಳು.

ಮಗು ಅಂಬೆಗಾಲಿಕ್ಕತೊಡಗಿತು. ಹಿಡಿದುಕೊಂಡು ನಿಲ್ಲುತ್ತಿತ್ತು. ಎಲ್ಲದರಲ್ಲಿಯೂ ತನ್ನ ಕೈಹಾಕತೊಡಗಿತು. ಬಾಲಲೀಲೆಯನ್ನು ನೋಡಿ ನೋಡಿ ತಂದೆ ತಾಯಿಗಳು ತಮ್ಮ ಅನುದಿನದ ಕಷ್ಟನಷ್ಟಗಳನ್ನೂ ಮರೆತರು.

ಗದ್ದೆಯಲ್ಲಿ ಚಿತ್ತಿದ ಗೋದಿ ಮೊಳೆಯಿತು ಒಕ್ಕಲಿಗರಿಗೆ ಕೆಲಸ ಕಡಿಮೆ. ಆಗ ಒಕ್ಕಲಿಗರಲ್ಲಿ ಮೋದ ಪ್ರಮೋದಗಳಲ್ಲಿ ಮಗ್ನರಾಗಿ ಅತ್ತಿಂದಿತ್ತ ಅಲೆ ದಾಡುವ ಕಾಲ. ಆದರೆ ವೆಂಗಲುಂಗನು ಮಿತವ್ಯಯಿಯಾದುದರಿಂದ ಇಂತಹ ಗದ್ದಲಗಳಲ್ಲಿ ಬೆರೆಯಲಿಲ್ಲ. ಎಲ್ಲರ ಪರಿಚಯ ಮಾಡಿಕೊಳ್ಳುವ ಹವ್ಯಾಸಕ್ಕೆ ಹೋಗಲಿಲ್ಲ. ಹಾಗೆ ಪರಿಚಯ ಮಾಡಿಕೊಂಡರೆ ಸಾಲ ಕೇಳಿ ದವರಿಗೆ ಇಲ್ಲೆನ್ನಲಾಗುತ್ತಿರಲಿಲ್ಲ. ಆದಕ್ಕಾಗಿ ಖರ್ಚಿಗೆ ಸಾಕಷ್ಟು ಹಣವ ನ್ನಿಟ್ಟುಕೊಂಡು ಉಳಿದದ್ದನ್ನೆಲ್ಲ ಹುಗಿದು ಹಾಕಿದರು.

೫

ಯುಗಾದಿ ಬಂದಿತು. ಮನೆ ಮನೆಯಲ್ಲೂ ಸಂಭ್ರಮ. ವೆಂಗಲುಂಗನು ಕೆಂಪು ಕಾಗದ ತಂದು, ಸುಖಸಮಾಧಾನಕಾರಕ ವಾಕ್ಯಗಳನ್ನು ಬರೆದು, ತನ್ನ ಬೇಸಾಯದ ಉಪಕರಣಗಳ ಮೇಲೆಲ್ಲ ಹಚ್ಚಿದ. ಮಂಗಲಕರ ವಾಕ್ಯ ಗಳನ್ನು ದೊಡ್ಡಕ್ಷರದಲ್ಲಿ ಬರೆದು ಬಾಗಿಲಿಗೆ ಹಚ್ಚಿದುದಾಯಿತು. ದೇವರ ಮೂರ್ತಿಗಳಿಗೆ ಸೀರೆಯನ್ನು ಮಾಡಉಡಿಸಲು ಬಗೆ ಬಗೆ ಬಂಣದ ಕಾಗದ ಬಂದವು. ಮುದುಕ ತನ್ನ ಕೈ ನಡಗುತ್ತಿದ್ದರೂ ಸಾವಧಾನವಾಗಿ ಅವುಗ ಗಳಿಂದ ಸೀರೆ ತಯಾರಿಸಿ ಮೂರ್ತಿಗೆ ತೊಡಿಸಿದ. ಹೊಸ ಹಬ್ಬದ ನಿಮಿ

ತ್ರವಾಗಿ ಮಂದಿರದಲ್ಲೆಲ್ಲ ಊದಬತ್ತಿ ಹಚ್ಚಿದ. ಹಂದಿಯ ನೆಣ, ಹಿಟ್ಟು, ಸಕ್ಕರೆ ಕೂಡಿಸಿ ರೊಟ್ಟಿ ಮಾಡಿದರು.

"ಈ ರೊಟ್ಟಿ ಮಾಡಿದುದು ತಿನ್ನಲಿಕ್ಕಲ್ಲ; ಹ್ಯಾಂಗ ಮಂದಿರದ ಒಡತಿಗೆ ಕೊಟ್ಟು ಬರಬೇಕೆಂದು ತಯಾರಿಸಿರುವೆ. ನಾಳೆ ಮಗುವನ್ನು ಕರೆದುಕೊಂಡು ನಾನು ಅಲ್ಲಿಗೆ ಹೋಗಿ ಬರುವೆ."

ಯುಗಾದಿಯ ಮೂರನೇ ದಿನ ಊರಲ್ಲಿಯ ಸ್ತ್ರೀಯರು ಒಬ್ಬರೊಬ್ಬರ ಮನೆಗೆ ಹೋಗಿ ಬರುವುದು ವಾಡಿಕೆ. ಆ ದಿನ ನಸುಕಿನಲ್ಲಿಯೇ ವೆಂಗಲುಂಗನ ಮನೆಯವರೆದ್ದರು. ಮಗುವಿಗೆ ಹೊಸ ಪೋಷಾಕು ತೊಡಿಸಿದರು. ಓಲಾನಳು ತನ್ನ ತಲೆಯ ಮೇಲೆ ಕೆಂಪು ಕುಲಾಯಿ ಧರಿಸಿದಳು. ವೆಂಗಲುಂಗನು ತನ್ನ ಉಡಿಗೆ ತೊಡಿಗೆಯನ್ನು ತೊಟ್ಟುಕೊಂಡು, ಮಗುವನ್ನೆತ್ತಿಕೊಂಡ. ಓಲಾನಳು ರೊಟ್ಟಿಯ ಬುಟ್ಟಿಯನ್ನು ಎತ್ತಿಕೊಂಡಳು. ಇಬ್ಬರೂ ಹ್ಯಾಂಗ ಮಂದಿರದ ಕಡೆಗೆ ಸಾಗಿದರು. ಬಾಗಿಲ ಕಾಯುವವನು ಅವರನ್ನು ಕಂಡು "ಏನಪ್ಪಾ, ಹೋದ ಸಲ ಒಬ್ಬನೇ ಬಂದಿದ್ದೆಯಲ್ಲ; ಈಗ ಮೂರು ಮಂದಿ ಬಂದಿರುವಿರಲ್ಲ" ಎಂದು ಶುಭವನ್ನು ಹಾರೈಸಿದ.

ಆಳು ಒಳಗೆ ಹೋಗಿ ಓಲಾನಳು ಬಂದ ಸುದ್ದಿ ಅರುಹಿದ. ಆಕೆ ಒಳಹೊಕ್ಕು ಎಲ್ಲರಿಗೂ ಭೆಟ್ಟಿಯಾಗಿ ತನ್ನ ಮಗುವನ್ನು ತೋರಿಸಿ ಹೆಮ್ಮೆಯಿಂದ ಹಿಂತಿರುಗಿದಳು. ಹೊರಗೇ ಕುಳಿತಿದ್ದ ವೆಂಗಲುಂಗನಿಗೆ ಒಳಗಿನ ವಾರ್ತೆಯನ್ನರಿಯಲು ಕುತೂಹಲ, ತವಕ.

"ಈ ವರ್ಷ ಅವರ ಸ್ಥಿತಿ ನೆಟ್ಟಗಿಲ್ಲ"

"ಹಾಗಂದರೆ ?"

"ಒಡತಿಯ ಮೈಮೇಲೆ ಹಿಂದಿನದೇ ವಸ್ತ್ರವಿತ್ತು. ನೌಕರರಿಗೂ ಹೊಸ ವಸ್ತ್ರವಿಲ್ಲ. ಹಿಂದೆಂದೂ ಹೀಗಾಗಿರಲಿಲ್ಲ. ನಾನು ತೊಟ್ಟಂತಹ ವಸ್ತ್ರವೂ ಅವರಿಗಿಲ್ಲ. ನಮ್ಮ ಹುಡುಗನಂತಹ ಮಕ್ಕಳೂ ಅವರಲ್ಲಿ ಯಾರಿಗೂ ಇರಲಿಲ್ಲ."

"ಅವರ ಸ್ಥಿತಿ ಹೀಗೇಕಾಯಿತೆಂಬುದರ ಬಗ್ಗೆ ಏನಾದರೂ ಬಲ್ಲಿಯಾ?"

"ನನಗೆ ಇದರ ಬಗ್ಗೆ ವಿಶೇಷ ಚರ್ಚಿಸಲಾಗಲಿಲ್ಲ. ಇಲ್ಲಿಯ ಐವತ್ತೈದು ಮಂದಿ ದೂರ ದೂರ ದೇಶದಲ್ಲಿ ನೆಲಸಿ ಸಿಕ್ಕಾಬಟ್ಟೆ ವೆಚ್ಚಮಾಡು

ತ್ತಿರುವರಂತೆ. ಅಲ್ಲದೆ ಮುದುಕಿಯೂ ದಿನಾಲು ಒಂದೆರಡು ಗುಂಜಿ ಬಂಗಾರದ ಅಫೀಮು ತಿನ್ನಹತ್ತಿದ್ದಾಳೆ. ಕೂತುಂಡರೆ ಕುಡಿಕೆ ಹಣವಾದರೂ ಎಲ್ಲಿ ಸಾಕಾದೀತು ?"

"ನಿಜ. ನಿಜ."

"ಅಲ್ಲದೆ ಮೂರನೇ ಮಗಳ ಲಗ್ನ ಬರುವ ಬೇಸಿಗೆಯಲ್ಲಾಗಲಿದೆ. ವರದಕ್ಷಿಣೆ ತುಂಬಾ ಕೊಡಬೇಕಾದೀತು. ಜವಳಿಯನ್ನೂ ಅಷ್ಟೇ ಪ್ರಮಾಣದಿಂದ ತಂದಿದ್ದಾರೆ. ಆಡಂಬರಕ್ಕೆ ಸರಿಯಾಗಿ ಶಾಂಘಯಿಯಿಂದಲೇ ಸಿಂಪಿಗನನ್ನು ಕರೆಯಿಸಿದ್ದಾರಂತೆ."

"ಇಷ್ಟೆಲ್ಲ ಖರ್ಚು ಮಾಡಿ ಯಾರಿಗೆ ಮದುವೆ ಮಾಡಿಕೊಡುವುದೆಂದು ಹೇಳಲೇ ಇಲ್ಲವಲ್ಲ!"

"ಶಾಂಘಾಯಿ ಮೆಜಿಸ್ಟ್ರೇಟನ ಎರಡನೇ ಮಗನಿಗೆ. ಅವರಿಗೀಗ ಹಣದ ಕೊರತೆಯಾಗಿದೆ. ಯಜಮಾನತಿಯೇ ತಮ್ಮ ಭೂಮಿ ಮಾರುವದಿದೆಯೆಂದು ನನ್ನೊಡನೆ ಹೇಳಿದಳು. ಆ ಜಮೀನು ಊರಿನ ಸಮೀಪದಲ್ಲಿದೆ. ಬೆಳೆಯುಳ್ಳ ಭೂಮಿ. ಯಾವಾಗಲೂ ನೀರಿನ ಸಂಪಿದೆ."

"ಭೂಮಿ ಮಾರಲು ತಯಾರಾಗಿದ್ದಾರೆಯೇ ? ಹಾಗಾದರೆ ನಿಜವಾಗಿಯೂ ಅಡಚಣೆಯಲ್ಲಿರಬೇಕು. ರೈತನಿಗೆ ಹೊಲವೇ ಸರ್ವಸ್ವ. ಹಾಗಾದರೆ ನಾವೇ ಅದನ್ನು ಕೊಂಡುಕೊಳ್ಳೋಣ."

"ಅದೇನೋ ಸರಿ. ಆದರೆ ಆ ಜಮೀನು ದೂರವಾಯ್ತು. ಅಲ್ಲಿ ಹೋಗಿ ಬರಲಿಕ್ಕೇ ಸಾಕು. ಹಣ ಹುಗಿದಿಡುವುದಕ್ಕಿಂತ ಜಮೀನಿಗೆ ಹಾಕುವದೇನು ಕೆಡುಕಲ್ಲ. ನಿಮ್ಮ ಚಿಗಪ್ಪನ ಭೂಮಿಯೇ ಇದೆಯಲ್ಲ ಕೊಳ್ಳುವದಾದರೆ. ಆತನೂ ಮಾರುವ ಪ್ರಯತ್ನದಲ್ಲೇ ಇದ್ದಾನಂತೆ."

"ಆದರೆ ಆ ಭೂಮಿಯಲ್ಲಿ ಸತ್ವವಿಲ್ಲ. ಈಗ ಇಪ್ಪತ್ತು ವರ್ಷವಾಯಿತು. ಒಂದು ಸಲವೂ ಗೊಬ್ಬರ ಹಾಕಿಲ್ಲ. ಭೂಮಿಯೆಲ್ಲ ಸುಟ್ಟು ಸುಣ್ಣವಾಗಿ ಹೋಗಿದೆ. ಏನೇ ಆಗಲಿ, ನಾನು ಹ್ವಾಂಗನ ಭೂಮಿಯನ್ನೇ ಕೊಳ್ಳುವೆ."

ಓಲಾನಳಿಗೂ ಹೆಮ್ಮೆಯೆಂದೆನಿಸಿತು. ಹೋದವರ್ಷ ವಾಸಿಯಾದವಳು ಒಡೆಯರಾದವರ ಜಮೀನಿನ ಒಡತಿಯಾಗುವೆನಲ್ಲ ಎಂಬ ಉತ್ಸಾಹ ಆಕೆಯ ಮೋರೆಯ ಮೇಲೆ ಕಂಡುಬಂತು.

೬

ವೆಂಗಲುಂಗನು ಮೂರನೇ ದಿನ ಕಣ್ಣು ಕಪ್ಪಿಗೇ "ಹ್ವಾಂಗ ಮಂದಿರ"ಕ್ಕೆ ಹೋದ. ಹೊತ್ತೇರಿದರೂ ಆ ಮನೆಯ ಮಾಲಕ ಎದ್ದಿರಲಿಲ್ಲ. ಆ ಕುಂಬಕರ್ಣನನ್ನು ಎಬ್ಬಿಸುವುದು ಯಾರಿಂದಲೂ ಸಾಧ್ಯವಿರಲಿಲ್ಲ.

"ಹಣಕಾಸಿನ ವಿಚಾರವಿದೆ. ನಿನ್ನೊಡೆಯನಿಗೆ ಎಬ್ಬಿಸು." ಎಂದು ಆಳಿಗೆ ಹೇಳಿದ.

"ಕುಬೇರನ ಐಶ್ವರ್ಯ ಸಿಕ್ಕರೂ ಏಳುವಂತಿಲ್ಲ. ಹೊಸ ಹೆಂಡತಿಯೊಡನೆ ಮಲಗಿದ್ದಾನೆ. ಆಕೆಯನ್ನಿಟ್ಟುಕೊಂಡು ಮೂರೇ ದಿನವಾಗಿದೆ. ಈಗ ಅವನನ್ನು ಎಬ್ಬಿಸುವದಾದರೆ ಜೀವದ ಆಸೆ ಬಿಟ್ಟೇ ಹೋಗಬೇಕು. ಹಣಕಾಸಿನ ಸಲುವಾಗಿ ಆತನೆಂದಾದರೂ ಏಳುವವ. ಬಂಗಾರದ ಚಿಪ್ಪನ್ನು ಬಾಯಲ್ಲಿಟ್ಟು ಬಂದವನಾತ."

ಕೊನೆಗೆ ಕಾರಕೂನನೊಡನೆಯೇ ಮಾತುಕತೆ ನಡಿಸಬೇಕಾಯಿತು. ಲುಂಗನು ಕೊಟ್ಟ ಹಣವನ್ನೆತ್ತಿಕೊಂಡು ಕಾರಕೂನನು "ಇದೇನು, ಯಜಮಾನತಿಗೆ ನಾಲ್ಕಾರು ದಿನದ ಅಫೀಮಿಗೆ ಸಾಕು" ಎಂದನು.

ವಸಂತ ಋತು ಕಳೆದು ಮಳೆಯೂ ಚನ್ನಾಗಿ ಬಿದ್ದಿತು. ಆ ದಿನಗಳಲ್ಲಂತೂ ವೆಂಗಲುಂಗ ತುಂಬಾ ದುಡಿಯಬೇಕಾಯಿತು. ಮುದುಕ ಮೊಮ್ಮಗನನ್ನು ಆಡಿಸುತ್ತಿದ್ದ. ಓಲಾನಳೂ ಹೊಲದಲ್ಲಿ ಮೈಮುರಿ ದುಡಿಯುತ್ತಿದ್ದಳು. ಆಕೆ ಮತ್ತೊಮ್ಮೆ ಗರ್ಭಧರಿಸಿದ್ದಾಳೆಂಬ ಸುದ್ದಿ ಕೇಳಿ ಲುಂಗನಿಗೆ "ಬಂದ ಬೆಳೆ ಕೊಯ್ಯಲು ಸಿಗುವಂತಿಲ್ಲವಲ್ಲ." ಎಂದು ಯೋಚನೆ ಬಂದು ಸಿಟ್ಟು ಬಂದಿತು.

"ನಿನಗೂ ಇದೇ ಸಮಯ ಬಂತೆಂದು ಕಾಣುತ್ತಿದೆ."

"ಈಗೇನೂ ತ್ರಾಸಿಲ್ಲ. ಮೊದಲಿನ ಸಲವೇ ಕಷ್ಟವಿತ್ತು."

ಅಂತೂ ಕೆಲದಿನದಲ್ಲಿಯೇ ಎರಡನೇ ಪುತ್ರೋತ್ಸವವಾಯಿತು. ದೇಹ ಕೃಶವಾಗಿದ್ದರೂ ಎಂದಿನಂತೆಯೇ ಕೆಲಸದಲ್ಲಿ ತೊಡಗಿದ್ದಳು. ಲುಂಗ ಮಗನನ್ನು ನೋಡಿ ಸಂತೋಷಪಟ್ಟ. ಓಲಾನಳು ತನ್ನ ಪಾಲಿನ ಲಕ್ಷ್ಮಿಯೇ ಎಂದು ಬಗೆದ.

ಆ ವರುಷವೂ ಬೆಳೆ ಚನ್ನಾಗಿ ಬಂದಿತು. ಹೊಸದಾಗಿ ಖರೀದಿ ಮಾಡಿದುದರಲ್ಲಿಯೂ ಬೆಳೆ ಹುಲುಸಾಗಿತ್ತು. ಕೈಯಲ್ಲಿ ಚನ್ನಾಗಿ ಹಣ ಓಡಾಡಹತ್ತಿತು. ಇವನೇ ನಮ್ಮೂರಲ್ಲಿಯ ಗಟ್ಟಿ ಆಸಾಮಿಯೆಂದು ಜನ ಆಡಿಕೊಳ್ಳತೊಡಗಿತು.

೭

ಈಗ ಚಿಗಪ್ಪನ ಕಿರಕುಳಕ್ಕೆ ಆರಂಭವಾಯಿತು. ಇಬ್ಬರೂ ಬಡವರಾಗಿದ್ದಾಗ ಯಾವ ಪ್ರಶ್ನೆಯೂ ಇದ್ದಿರಲಿಲ್ಲ. ಚಿಗಪ್ಪನಿಗೆ ಏಳು ಮಕ್ಕಳು. ಹೆಣ್ಣು ಮಕ್ಕಳೆಲ್ಲ ಮದುವೆಗೆ ನೆರೆದಿದ್ದರು. ಚಿಗಪ್ಪನ ಹೆಂಡತಿ ಯಾವ ಕೆಲಸಕ್ಕೂ ಬಾರದವಳು. ಹೇಗೋ ಬೆಳೆ ಬರುವಲ್ಲಿಯ ವರೆಗೆ ಹೊಲದ ಕಡೆ ಕಣ್ಣು ಹಾಯಿಸುತ್ತಿದ್ದರು. ಬೆಳೆ ಬಂದ ಮೇಲೆ ಖರ್ಚಾಗುವ ವರೆಗೂ ಅತ್ತಿತ್ತ ಉಲುಕಾಡುತ್ತಿರಲಿಲ್ಲ ಹೆಣ್ಣು ಮಕ್ಕಳ ಮದುವೆ ಮಾಡಬೇಕೆಂಬ ವಿಚಾರವೂ ಅವರಿಗಿದ್ದಂತಿರಲಿಲ್ಲ

ಒಮ್ಮೆ ಚಿಗಪ್ಪನ ಮಗಳು ಯಾರೊಡನೆಯೋ ನಗುತ್ತ ಕೆಲೆಯುತ್ತ ಬೀದಿಯಲ್ಲಿ ನಿಂತಿದ್ದುದು ವೆಂಗಲುಂಗನ ಕಣ್ಣಿಗೆ ಬಿದ್ದಿತು. ಅವನಿಂದ ಸಹಿಸಲಾಗಲಿಲ್ಲ ನೆಟ್ಟಗೆ ಚಿಗಪ್ಪನ ಹೆಂಡತಿಯ ಹತ್ತರ ಹೋಗಿ ದೂರಿದ. ಆಕೆ ರಂಬಾಟವೆಬ್ಬಿಸಿಬಿಟ್ಟಳು. "ನಿಮ್ಮಂತ ಶ್ರೀಮಂತರಿಗಾದೀತು ಬೇರೆಯವರ ಭೂಮಿ ಕೊಳ್ಳುವಷ್ಟು ಗಂಟಿದ್ದ ಮಂದಿ. ಹುಟ್ಟ್ಯೋದೆಲ್ಲ ಗಂಡೇ ನಿಮಗೆ. ಯಾರೇನು ಮಾಡುವರು! ನಮ್ಮದೇ ದುರ್ದೈವ!! ಹುಟ್ಟಿದ್ದೆಲ್ಲ ಹೆಣ್ಣೇ ಆಗಬೇಕೇ?"

ಗದ್ದಲ ಕೇಳಿ ಸುತ್ತಲಿನ ಹೆಂಗಸರೆಲ್ಲ ನೆರೆದರು. "ನನ್ನ ಚಿಗಪ್ಪನಿಗೆ ಬುದ್ಧಿ ಹೇಳುವ ಯೋಗ್ಯತೆ ನನ್ನದಲ್ಲ. ಆದರೂ ಹುಡಿಗಿಯೆಂದ ಮೇಲೆ ಲಗ್ನ ಮಾಡಲೇಬೇಕು. ಬೀದಿಯಲ್ಲಿ ತಿರುಗುವ ನಾಯಿ ಕುನ್ನಿಗಳನ್ನು ಹಡೆಯದೇ ಇದ್ದೀತೇ?"

ಇಷ್ಟು ಹೇಳಿ ಆತ ಹೋಗಿಯೇ ಬಿಟ್ಟ. ಚಿಗವ್ವಿ ಅಳುತ್ತಲೇ ಇದ್ದಳು. ಈ ವರ್ಷ ಇನ್ನಿಷ್ಟು ಭೂಮಿ ಕೊಳ್ಳಬೇಕೆಂದು ಲೆಖ್ಖ ಹಾಗುತ್ತಿದ್ದ. ಮೂರನೇ ದಿನ ಆತನೊಬ್ಬನೇ ಗದ್ದೆಯಲ್ಲಿ ಕೆಲಸ ಮಾಡುತ್ತಿದ್ದಾಗ ಚಿಗಪ್ಪ

ಬಂದು ಮೌನವಾಗಿ ನಿಂತಿದ್ದ. ಮೆಂಗಲುಂಗ ಕೆಲಸ ಮಾಡುತ್ತಲೇ " ಚಿಗಪ್ಪ, ಏನು ಬಂದೆ? " ಎಂದು ಕೇಳಿದ.

" ಈ ವರ್ಷ ೨೦ ರಲ್ಲಿ ಒಂದು ಪಾಲೂ ಬೆಳೆ ಬಂದಿಲ್ಲ. ತಿನ್ನುಣ್ಣುವು ದಕ್ಕೊ ಮಾರಾಮಾರಿ " ಎಂದು ನಿಟ್ಟುಸಿರಿಟ್ಟ.

ತನ್ನ ಹತ್ತಿರ ಹಣ ಕೇಳುವುದಕ್ಕೇ ಈ ಪ್ರಸ್ತಾವನೆಯೆಂದು ಲುಂಗನಿಗೆ ಹೊಳೆಯದೇ ಹೋಗಲಿಲ್ಲ. ಚಿಗಪ್ಪನೇ ಕೆಲಹೊತ್ತು ತಡೆದು " ನೀನು ಹೇಳಿದ ಸಂಗತಿಯೆಲ್ಲ ನನಗೆ ಗೊತ್ತಾಗಿದೆ. ಹೇಗಾದರೂ ಮಾಡಿ ಮಗಳ ಲಗ್ನ ಮಾಡಲೇಬೇಕು. ಇಲ್ಲವಾದರೆ ನನಗೂ ನಿನಗೂ ಕೂಡಿಯೇ ಮಾನಹೋಗುವ ಪ್ರಸಂಗ ಬಂದೀತು. "

" ಅದು ನಿಜ. ಅವರನ್ನೆಲ್ಲ ಮನೆಯ ಕೆಲಸಕ್ಕೇಕೆ ಹಚ್ಚುವದಿಲ್ಲ ! "

" ನಿನ್ನಂತಹ ಹೆಂಡತಿ ನನಗೆಲ್ಲಿಂದ ಸಿಗಬೇಕು. ಕೂತು ತಿನ್ನೋದು. ಹೆಣ್ಣು ಮಕ್ಕಳನ್ನು ಹಡೆಯೋದಷ್ಟೇ ಆಕೆಯ ಕೆಲಸ. ನನಗೂ ಗಂಡು ಮಕ್ಕಳಿದ್ದರೆ, ನಾನೂ ಊರಪ್ಪಂತೆ ಮಾಡಿ ನಿಮ್ಮಂತಹ ಶ್ರೀಮಂತರ ಸಂಗಡ ನಲಿಯುತ್ತಿದ್ದೆವು. ಮಗನಿಗೂ ಒಂದು ಅಂಗಡಿ ಮಾಡಿಕೊಡುತಿದ್ದೆ. ಪ್ರಸಂಗ ಬಿದ್ದರೆ ನಿನಗೂ, ನಿನ್ನ ತಂದೆಗೂ ಮನೆಯಲ್ಲಿಟ್ಟು ಸಾಕುತ್ತಿದ್ದೆ. ಎಷ್ಟೆಂದರೂ ನಾವೆಲ್ಲ ಒಂದೇ ಅಲ್ಲವೇ ? "

" ನಾನೂ ಏನು ಶ್ರೀಮಂತ ಅಲ್ಲ. ಮನೆಯಲ್ಲಿ ನಾವು ಐದು ಮಂದಿ ತಿನ್ನುವವರು. ಅಲ್ಲದೆ ಹೆಂಡತಿ ಗರ್ಭಿಣಿ. "

" ನೀನು ಶ್ರೀಮಂತನಲ್ಲದಿದ್ದರೆ ಹ್ಯಾಂಗನ ಭೂಮಿ ಹೇಗೆ ಕೊಳ್ಳುತ್ತಿದ್ದೆ ?"

" ಹೌದು, ಸ್ವಲ್ಪ ಹಣ ಕೂಡಿಸಿದ್ದೇನೋ ನಿಜ. ನಾನೂ ನನ್ನ ಹೆಂಡತಿ ಮೈಮುರಿದು ದುಡಿಯುತ್ತೇವೆ. ನಾವೇನು ಬೇರೆಯವರಂತೆ ಜುಗಾರಿಯಾಡುತ್ತ, ಹರಟೆ ಹೊಡೆಯುತ್ತ ಕಾಲಹರಣ ಮಾಡುವದಿಲ್ಲ ? "

" ಯಾರೊಡನೆ ಈ ಮಾತಾಡಹತ್ತಿರುವೆ ? ಚಿಗಪ್ಪನೆಂದಾದರೂ ನೋಡಬಾರದೇ ? ಹೆಂಚು ಕಂಡವನಿಗೆ ಕಂಚು ಕಂಡಂತಾಗಿದೆ. ಧರ್ಮ ಶಿಷ್ಟಾಚಾರ ಎಂಬುದೂ ಎಳ್ಳಷ್ಟೂ ಇರಬಾರದೆ ? ನನ್ನ ಮಗಳ ಅಪಮಾನವನ್ನೂ ಮಾಡಿದುದಲ್ಲದೆ, ನನಗೂ ಸಿಕ್ಕಂತೆ ಮಾತನಾಡಿದೆಯೆಂದು ಊರಲ್ಲೆಲ್ಲ ಸುದ್ದಿ ಹಬ್ಬಿಸುತ್ತೇನೆ " ಎಂದು ಎರಡೇಟು ಬಿಗಿದ.

“ ಹಾಗಾದರೆ ನನ್ನಿಂದ ಆಗಬೇಕಾದದ್ದಾದರೂ ಏನು. ”

ಚಿಗಪ್ಪನ ಸಿಟ್ಟೆಲ್ಲ ಹಾರಿಹೋಯಿತು. ಮುಗುಳು ನಗುತ್ತ ಆತನ ಕೈಹಿಡಿದು “ ಒಳ್ಳೆಯ ಹುಡುಗ ನೀನು. ನೀನು ಹೇಳುವುದು ನಿಜ. ಮಗಳ ಮದುವೆ ಮಾಡಿಬಿಡುತ್ತೇನೆ. ೮-೧೦ ಬೆಳ್ಳಿಯ ನಾಣ್ಯ ಕೊಟ್ಟುಬಿಡು. ”

“ ಕೆಲಸಕ್ಕೆ ಬರುವಾಗಲೆಲ್ಲ ಹಣ ಹೊತ್ತುಕೊಂಡು ತಿರುಗಲು ನಾನೇನು ರಾಜಕುಮಾರನಲ್ಲ! ಮನೆಗೆ ಬಾ, ಕೊಡುತ್ತೇನೆ. ” ಎಂದು ಶೀಘ್ರವಾಗಿ ಮುಂದೆ ನಡೆದ. ಮನೆಯಲ್ಲಿ ಹೆಂಡತಿ ಹೆಣ್ಣು ಹಡೆದಿದ್ದಳು. ತನ್ನ ಕೋಣೆಗೆ ಹೋಗಿ ರೂಪಾಯಿ ಎಣಿಸಿದ. ಚಿಗಪ್ಪನ ಕೈಗಿತ್ತ. ಆದರೂ ಮಾತಾಡಲಿಲ್ಲ.

ಸಾಯಂಕಾಲ ಸಿಟ್ಟು ಇಳಿದಿತ್ತು. ಗದ್ದೆಯಲ್ಲಿ ಕೆಲಸ ಮಾಡುತ್ತಿದ್ದ. ಅಷ್ಟೊತ್ತಿಗೆ ಕಾಗೆಗಳ ಗುಂಪು ತಲೆಯ ಬಳಿ ಒದರಹತ್ತಿತು. ಏನೋ ದುಶ್ಯಕುನ ಎಂದುಕೊಂಡ.

೮

ಮಳೆಗಾಲದ ಆರಂಭದಲ್ಲೆಷ್ಟು ಮಳೆಯಾಗಿತ್ತೋ ಅಷ್ಟೇ ಮಳೆ. ಮುಂದೆ ಒಂದು ಹನಿಯೂ ಬೀಳಲಿಲ್ಲ. ಗದ್ದೆ ಒಣಗಿತು. ಕೆರೆ ಒಣಗಿತು. ಕುಡಿವ ನೀರಿಗೂ ತತ್ವಾರವಾಯಿತು. ಎಲ್ಲಿಯೂ ಬೆಳೆಯಿಲ್ಲ. ಹೊಸದಾಗಿ ಕೊಂಡ ಭೂಮಿಯಲ್ಲೇನೋ ತುಸು ಬೆಳೆ ಬಂದಿತ್ತು. ಈ ಸಲ ಅದನ್ನು ಮಾರಿದ. ಮೊದಲಿನ ಹಣ ಸ್ವಲ್ಪ ಇತ್ತು. ಅವನ್ನೆಲ್ಲ ಕೂಡಿಸಿ ಹ್ವಾಂಗನ ಇನ್ನಷ್ಟು ಭೂಮಿಯನ್ನು ಕೊಳ್ಳುವದೆಂದು ಯೋಚಿಸಿದ.

ಹ್ವಾಂಗ ಮನೆತನದ ಒಡತಿಗೆ ಅಫೀಮಿಗೆ ಕಾಸಿಲ್ಲದೆ ಬಹಳ ದಿನವಾಗಿತ್ತು. ಮನೆಯ ವ್ಯವಸ್ಥಾಪಕನಿಗೆ ಅಫೀಮಿನ ವ್ಯವಸ್ಥೆ ಮಾಡಲು ಆಜ್ಞೆ ಮಾಡುತ್ತಿದ್ದಳು. ಆದರೆ ಉತ್ಪನ್ನವಿರಲಿಲ್ಲ. ಮಳೆ ಇಲ್ಲದೆ ಬೆಳೆ ಬಾರದ್ದರಿಂದ ಭೂಮಿಯನ್ನು ಕೊಳ್ಳುವವರೂ ಇದ್ದಿಲ್ಲ. ಇನ್ನೊಂದು ಮಳೆಗಾಲದ ವರೆಗೆ ಹೇಗೆ ದಿನ ದೂಡುವದೆಂದು ಎಲ್ಲರೂ ಚಿಂತಾಮಗ್ನರಾಗಿದ್ದರು.

ಒಂದು ದಿನ ವೆಂಗಲುಂಗ ಬಂದು ಭೂಮಿಕೊಳ್ಳುವದಾಗಿ ವ್ಯವಸ್ಥಾಪಕನಿಗೆ ತಿಳಿಸಿದ. ಆತನಿಗೆ ಹಿಡಿಸಲಾರದಷ್ಟು ಹಿಗ್ಗು ಉಂಟಾಯಿತು.

ಅಂತೂ ಆವಶ್ಯಕ ಕಾಗದ ಪತ್ರಗಳನ್ನು ಮಾಡಿ ಭೂಮಿಯನ್ನು ಕೊಂಡು ದಾಯಿತು.

ಆದರೆ ಮುಂದಿನ ವರ್ಷವೂ ಮಳೆಯಿಲ್ಲ. ದೂರದಿಂದ ನೀರು ತಂದು ಹನಿಗಿದ್ದರಿಂದ ತುಸು ಬೆಳೆ ಬಂದಿತ್ತು. ಧಾನ್ಯ ಬಡಿದು ಹುಲ್ಲನ್ನು ಬೇರೆ ಮಾಡಿದ. ಆ ಹುಲ್ಲನ್ನೆಲ್ಲ ಸುಡುವುದಕ್ಕೆಂದು ಒಂದೆಡೆ ಒಟ್ಟುತ್ತಿದ್ದ. ಆಗ ಮಗಳಿಗೆ ಹಾಲು ಕುಡಿಸುತ್ತಿದ್ದ ಓಲಾನಳು "ಇದನ್ನು ಸುಡಬೇಡಿ. ಇನ್ನೆಂತಹ ಕಾಲ ಬರುವದಿದೆಯೋ ಯಾರು ಬಲ್ಲ. ಹಿಂದೆ ನಾನು ಚಿಕ್ಕ ವಳಿದ್ದಾಗ ಒಂದು ಬರಗಾಲ ಬಂದಿತ್ತಂತೆ. ಊರೂರು ಬಿಟ್ಟು ದನಕರುಗ ಳನ್ನೆಲ್ಲ ಮಾರಿ ಒಂದು ಹಿಡಿ ಅನ್ನಕ್ಕಾಗಿ ಊರೂರು ಜನ ಅಲೆಯುತ್ತಿದ್ದ ರಂತೆ. ಅಂತಹ ಹಾಳು ಕಾಲ ಬರಲಿದೆಯೋ ಯಾರು ಬಲ್ಲ? ಆಗ ಹುಲ್ಲು ತಿಂದು ಜೀವಿಸಿದವರೂ ಇದ್ದರಂತೆ."

ಆತನ ಪ್ರೀತಿಯ ಎತ್ತು ಹೊಟ್ಟೆಗಿಲ್ಲದೆ ಸೊರಗಿತ್ತು. ಒಳಗಿನಿಂದ ತಂದೆ "ಅನ್ನವಿಲ್ಲದೆ ಬದುಕುವ ಆಸೆ" ಬಿಟ್ಟಿದ್ದ.

ಒಮ್ಮೆ "ಮಗನೇ ಇನ್ನು ಆ ಎತ್ತನ್ನಾದರೂ ತಿಂದು ಬದುಕೋಣ" ಎಂದ. "ಇಂದು ಎತ್ತು ತಿನ್ನುವದು! ನಾಳೆ ಮನುಷ್ಯರನ್ನೇ ತಿನ್ನಬೇ ಕಾದೀತು. ಎತ್ತು ತಿಂದರೆ ಹೊಲ ಹೂಳುವದೆಂತು?"

"ನಾವು ಬದುಕಿದರಲ್ಲವೇ ಹೊಲ ಮನೆ, ಎತ್ತು ಬೇಕಾದಷ್ಟು ಕೊಳ್ಳಬಹುದು. ಆದರೆ ನಾವೇನು ತಿರುಗಿ ಬರುವೆವೇ?"

ಆದರೂ ಆತನ ಕೈಯೇಳಲಿಲ್ಲ. ಒಂದು ದಿನ ಓಲಾನಳೂ ಇದೇ ಬೇಡಿಕೆಯನ್ನು ಇನ್ನೊಮ್ಮೆ ಎತ್ತಿದಳು. "ನಾನಂತೂ ಸಾಕಿದ ಪಶು ವನ್ನು ಕೊಲ್ಲಲಾರೆ. ಇನ್ನಾರಾದರೂ ಮಾಡಿಕೊಳ್ಳಲಿ" ಎಂದು ಉತ್ತರ ದೊರಕಿತು.

ಆತ ತನ್ನ ಕೋಣೆಯಲ್ಲಿ ದುಃಖದಿಂದ ಮಲಗಿದ. ಓಲಾನಳು ಎತ್ತಿನ ಕೆಲಸ ತೀರಿಸಿಬಿಟ್ಟಳು. ವೆಂಗಲುಂಗನಿಗೆ ಆದರ ಮಾಂಸ ಬಡಿಸಿದಾಗ ಆತನಿಂದ ತಿನ್ನಲಾಗಲಿಲ್ಲ. ತುಸು ಶರಬತ್ತು ಮಾತ್ರ ಕುಡಿದ.

"ಎಷ್ಟಾದರೂ ಮುಪ್ಪಿನಿಂದ ಸಾಯಲಾಗಿತ್ತು. ಆದರ ಮಾಂಸವ ನ್ನೇಕೆ ತಿನ್ನಲಿಲ್ಲ?" ಎಂದು ಓಲಾನಳೆಂದಳು. ಮೂರನೇ ದಿನ ವೆಂಗ ಲುಂಗ ಒಂದೆರಡು ಹೋಳು ತಿಂದಂತೆ ಮಾಡಿದ, ಉಳಿದವರೆಲ್ಲ ತಿಂದರು.

ಒಮ್ಮೆ ಚಿಗಪ್ಪ ತನ್ನ ಮನೆಯಲ್ಲೇನೂ ಇಲ್ಲವೆಂದು ಬೇಡಲು ಬಂದ. ಆಗ ವೆಂಗಲುಂಗ ಇದ್ದ ತುಸು ಧಾನ್ಯವನ್ನೇ ಆತನಿಗೂ ಕೊಟ್ಟು ತನ್ನಲ್ಲಿ ಇನ್ನೇನೂ ಇಲ್ಲವೆಂದು ಹೇಳಿ ಕಳಿಸಿದ. ಇನ್ನೊಮ್ಮೆ ಬಂದಾಗ ಬಂದ ದಾರಿ ಸುಂಕವಿಲ್ಲದೆ ತಿರುಗಿ ಹೋಗಬೇಕಾಯಿತು. ಆದರೆ ವೆಂಗಲುಂಗನ ಮೇಲೆ ಸೇಡು ತೀರಿಸಿಕೊಳ್ಳಲು ನಿಶ್ಚಯಿಸಿದ. ಹಾಗೂ ಊರಲ್ಲೆಲ್ಲ "ಈ ಊರಲ್ಲಿ ದುಡ್ಡು, ಧಾನ್ಯ ಸಮೃದ್ಧಿಯಾಗುಳ್ಳವನೆಂದರೆ ವೆಂಗಲುಂಗ" ನೊಬ್ಬನೇ ಎಂದು ಸಾರಹತ್ತಿದ.

ಒಂದು ರಾತ್ರಿ ಊರ ಜನವೆಲ್ಲ ತಂಡಗಟ್ಟಿ ಅವನ ಮನೆಯ ಕೊಳ್ಳೆ ಹೊಡೆಯಲು ಬಂದರು. ಕೆಲವರು ವೆಂಗನನ್ನು ಎಳೆದುಕೊಂಡು ಹೊರಗೆ ತೆಗೆದುಕೊಂಡು ಹೋದರು. ಮಕ್ಕಳು ಮರಿಗಳು ಚೀರಿ ಮನೆಯಲ್ಲಿ ಅವಿತು ಕೊಂಡರು. ಮುದುಕನಂತೂ ಭಯದಿಂದ ನಡಗುತ್ತಿದ್ದ. ಬಂದ ಜನ ಸಂದಿಗೊಂದಿಗಳನ್ನೆಲ್ಲ ಶೋಧಿಸಿದರು. ಆದರೆ ಏನೂ ದೊರೆಯಲಿಲ್ಲ. ಓಲಾ ನಳು ಮುಂದೆ ಬಂದು "ಜನರೇ, ನಿಮ್ಮ ಮನೆಯಲ್ಲಿಯೂ ಇಲ್ಲ. ನಮ್ಮ ಲ್ಲಿಯೂ ಇಲ್ಲ. ನಮ್ಮ ಮಕ್ಕಳು ಮರಿಗಳನ್ನೆಲ್ಲ ಕಟ್ಟಿಕೊಂಡು ಎಲ್ಲಿಯಾದರೂ ಹೋಗಿ ಬಿಡೋಣ" ಎಂದಳು.

ಆ ಸಂತ್ರಸ್ತ ಜನತೆಯಲ್ಲಿ ಚೆಂಗನೆಂಬ ಸದ್ಗೃಹಸ್ಥನೂ ಸೇರಿದ್ದ. ಆತನೆಂದೂ ಇಂತಹ ಕೆಲಸಕ್ಕೆ ಬಂದವನಲ್ಲ. ಮನಸ್ಸೂ ಒಪ್ಪುತ್ತಿರಲಿಲ್ಲ. ಆದರೆ ಮನೆಯಲ್ಲಿಯ ಮಕ್ಕಳ ಕರುಣ ಕ್ರಂದನವನ್ನು ಕೇಳಲಾರದೆ ಈ ಗುಂಪಿನ ಜೊತೆಗೂಡಿದ್ದ.

ವೆಂಗಲುಂಗ ಅಂಗಳದಲ್ಲಿದ್ದು ಆ ಕಷ್ಟದಲ್ಲಿಯೇ ಸಂತೋಷಪಡು ತ್ತಿದ್ದ. ಕಣ್ಣೀರು ಸವರಿದ ನಾಲಿಗೆಯಿಂದ ಪೆಪ್ಪರಮೆಂಟು ಚಪ್ಪರಿಸಿದ ಹಾಗೆ, "ಏನೇ ಆಗಲಿ, ಜಮೀನು ಕೊಂಡದ್ದು ಒಳ್ಳೆಯದೇ ಆಯಿತು. ದುಡ್ಡಿದ್ದರೆ, ಧಾನ್ಯವಿದ್ದರೆ ಇವರೇನೂ ಬಿಡುತ್ತಿರಲಿಲ್ಲ. ಭೂಮಿಯನ್ನೇನೂ ಕಸಿದುಕೊಳ್ಳಲಾರರು" ಎಂದು ಯೋಚಿಸುತ್ತಿದ್ದ.

೯

ಇನ್ನು ಆ ಊರಲ್ಲಿರುವುದು ತರವಲ್ಲವೆಂದು ಯೋಚಿಸಿದ. ಆತನಿಗೆ ದೇವರೇ ಇಲ್ಲವೆಂದು ಅನಿಸಹತ್ತಿತು. ಹೊಲ ನೋಡಿ ದುಃಖದಿಂದ ಆತಾ

ಕಡೆಡೆಗೆ ನೋರಿ ಮಾಡಿ ದೇವರನ್ನು ಬಯ್ಯುಹತ್ತಿದ. ಆತನ ಕಾಲುಗಳಲ್ಲಿ ಮೊದಲಿನ ಬಲವಿದ್ದಿಲ್ಲ. ಹೇಗೆ ಹೇಗೋ ಮಾಡಿ ಭೂದೇವಿಯ ಗುಡಿಗೆ ಹೋಗಿ ಮೂರ್ತಿಯ ಮೇಲೆ ಉಗುಳಿದ.

ಎಲ್ಲೆಲ್ಲಿಯೂ ಪ್ರಾಣಿಸಂಚಾರವಿದ್ದಿಲ್ಲ. ಮಕ್ಕಳ ಹೊಟ್ಟೆ ಹವೆಯ ವಾಸಸ್ಥಾನವಾಗಿತ್ತು. ಮಗುವಿಗೆ ನಡೆದಾಡುವ ವಯಸ್ಸಾಗಿದ್ದರೂ ಕೂತು ಕೊಳ್ಳಲು ಬರುತ್ತಿರಲಿಲ್ಲ. ಅವನ ತಂದೆಯಂತೂ ಏನಾದರೂ ಮನೆಯಲ್ಲಿ ದ್ದರೆ ತಾನೇ ಮೊದಲು ಬಾಯಿಗೆ ಹಾಕಿಕೊಂಡು ಬಿಡುತ್ತಿದ್ದ. ವೆಂಗ ಲುಂಗನಿಗೆ ಮುದಿಕಾಲದಲ್ಲಿ ತಂದೆಯನ್ನು ಬಯ್ಯುತ್ತಾನೆಂದು ಜನರು ಆಡಿ ಕೊಳ್ಳಬಹುದೆಂದು ಭಯ. ಇದ್ದದರಲ್ಲಿ ಮುದುಕನೇ ಸಂತೋಷದಿಂದ ಇದ್ದ. ಯಾಕಂದರೆ ಆತನ ಜೀವನದಲ್ಲಿ ಇದಕ್ಕೂ ಹೆಚ್ಚಿನ ಕಷ್ಟಕಾಲಗ ಳನ್ನು ನೋಡಿದ್ದ.

ಒಂದು ದಿನ ಚಿಂಗ ಬಂದು ಪಟ್ಟಣದ ಸ್ಥಿತಿ ವರ್ಣಿಸಿದ. “ಕುದುರೆ ಎತ್ತುಗಳನ್ನೇಕೆ ನಾಯಿಯನ್ನು ಸಹ ಜನ ತಿನ್ನಹತ್ತಿದ್ದಾರೆ. ನಾವೂ ನಮ್ಮ ಎತ್ತುಗಳನ್ನೂ ತಿಂದುದಾಯಿತು. ಹುಲ್ಲು, ಮರದೆಲೆಗಳನ್ನೂ ಮುಕ್ಕಿದುದಾ ಯಿತು. ಇನ್ನೂ ಎಂತೆಂತಹ ದಿನ ಬಂದೀತೋ ಯಾರು ಬಲ್ಲ. ? ಈಗ ಎಷ್ಟೋ ಜನ ಮನುಷ್ಯರನ್ನೇ ತಿನ್ನಹತ್ತಿದ್ದಾರಂತೆ. ಹೆಚ್ಚೇನು ನಿನ್ನ ಚಿಗಪ್ಪ ಚಿಗವ್ವ ಇದೇ ಉದ್ಯೋಗ ನಡಿಸಿದ್ದಾರಾಗಿ ಆಡಿಕೊಳ್ಳುತ್ತಿದ್ದಾರೆ. ಇಲ್ಲದಿ ದ್ದರೆ ಆ ನಿರುದ್ಯೋಗಿಗಳು ಇನ್ನೂ ಗಟ್ಟಿಮುಟ್ಟಾಗಿ ಓಡಾಡುತ್ತಿದ್ದಾರಲ್ಲ !”

ವೆಂಗಲುಂಗ ಬೆಚ್ಚಿದ. “ಸಾಯುಲಪ್ಪಾ ! ನಾವು ಈ ಊರನ್ನೇ ಬಿಟ್ಟು ಹೋಗುತ್ತೇವೆ.”

“ನಿನಗೇನಪ್ಪಾ ! ಎಷ್ಟಾದರೂ ತರುಣ. ಊರು ಬಿಟ್ಟು ಹೋಗ ಬಹುದು. ನಾನೂ, ನನ್ನ ಹೆಂಡತಿ ಇಬ್ಬರೂ ಮುಪ್ಪಿನವರು. ಅಲ್ಲದೆ ಒಂದು ಹುಡುಗಿ ಇದ್ದಾಳೆ. ನಮಗೆ ಸಾವೇ ಗತಿ.”

“ಆದರೆ ನನ್ನ ಮೇಲೆ ಐದು ಮಂದಿ ಅವಲಂಬಿಸಿದ್ದಾರೆ, ತಂದೆ ಯಂತೂ ಮುದುಕ, ನಾವು ಹೊರಬಿದ್ದರೂ ನಮ್ಮ ಜನದ ಕೆಟ್ಟ ಸ್ವಭಾವ ಹೋಗುವಂತಿಲ್ಲ.” ನಾಳೆಯೇ ನಾವು ಇಲ್ಲಿಂದ ಹೊರಡುತ್ತೇವೆ. ಆದರೆ ಮನೆಯಲ್ಲಿ ಒಂದು ದಿನದ ಆಹಾರವೂ ಇಲ್ಲ. ನಿನ್ನ ಹತ್ತಿರ ಇದ್ದರೆ ಕೊಡು,

ನಿನ್ನ ಉಪಕಾರವನ್ನೆಂದೂ ಮರೆಯಲಾರೆ. ಅಲ್ಲದೆ ನೀನೂ ಒಮ್ಮೆ ಊಟ ಮಾಡಲು ಬಂದಿದ್ದೆಯೆಂಬುದನ್ನು ಸಹ ಮರೆತು ಬಿಡುತ್ತೇನೆ."

"ಆ ಪ್ರಸಂಗವನ್ನು ನೆನಸಿ ನಾನು ಈಗಲೂ ನಾಚಿಕೆಪಟ್ಟುಕೊಳ್ಳು ತ್ತಿದ್ದೇನೆ. ಅದಕ್ಕೆಲ್ಲ ನಿನ್ನ ಚಿಗಪ್ಪನೇ ಕಾರಣ ಸಾಯುವಾಗ ಒಂದೆರಡು ತುತ್ತು ತಿಂದು ಸಾಯೋಣವೆಂದು ತುಸು ಧಾನ್ಯ ಕಾದಿಟ್ಟಿರುವೆ. ಅದರ ಲ್ಲಿಯೇ ಒಂದೆರಡು ಹಿಡಿ ನಿನಗೆ ಕೊಡುವೆ. ನನಗೇನೂ ಮಕ್ಕಳು ಮರಿಗ ಳಿಲ್ಲ. ಇದ್ದರೂ ಒಂದೇ, ಸತ್ತರೂ ಒಂದೇ."

ಆತ ಮನೆಗೆ ಹೋಗಿ ತುಸು ಕಾಳು ತಂದು ಕೊಟ್ಟ. ಅದರಲ್ಲಿ ಮಣ್ಣು ಬೆರೆತಿತ್ತು. ಅದನ್ನೇ ಜಗಿದು ರಸವನ್ನು ಮಗುವಿನ ಬಾಯಿಗೆ ಬಿಟ್ಟ. ಅದು ತುಟಿಯನ್ನಾಡಿಸಹತ್ತಿತ್ತು.

ಸುಖವಾಗಲಿ ದು:ಖವಾಗಲಿ ಬಂದರೆ ಬೆನ್ನು ಹತ್ತಿಯೇ ಬರುತ್ತಿದೆ. ಹಾಗೆಯೇ ಓಲಾನಳಿಗೆ ನಾಲ್ಕನೆಯ ಶಿಶುವಾಯಿತು. ಮಗುವಿನ ರೋದನ ದನಿ ಕೇಳಿ ವೆಂಗ ಒಳಗೆ ಹೋಗಿ ನೋಡಿದ ಮಗುವಿನ ದನಿ ನಿಂತಿತ್ತು ತಾಯಿ ಹತಾಶಳಾಗಿ ಬಿದ್ದಿದ್ದಳು ಮಗುವನ್ನು ಕುತ್ತಿಗೆ ಹಿಚುಕಿ ಹಾಕಿದ್ದಳು. ಮಾಡುವದೇನು ? ಆ ಮಗುವನ್ನು ಹೊರಗೆ ತಂದು ಹುಗಿಯಬೇಕೆನ್ನುವಷ್ಟ ರಲ್ಲಿ ಹಸಿದ ನಾಯೊಂದು ಬಂದು ಎತ್ತಿಕೊಂಡು ಹೋಯಿತು. ವೆಂಗ ಕಲ್ಲೊಗೆಯಲು ಯತ್ನಿಸಿದ. ಆದರೆ ಕೈಯಲ್ಲಿ ಬಲವೇ ಇದ್ದಿಲ್ಲ. ಅಂತೂ ಸಾವಕಾಶ ಮನೆಗೆ ಬಂದ ಸೇರಿದ.

ಮೂರನೇ ದಿನ ಹೋಗುವದೆಂದು ನಿಶ್ಚಯಿಸಿದ ಕೈಯಲ್ಲಿ ಕಾಸಿರ ಲಿಲ್ಲ. ಹೋಗಬೇಕೆಂದರೆ ಕನಿಷ್ಠ ನೂರು ಮೈಲು ದೂರ ಮೈಯಲ್ಲಿ ಬಲ ವಿಲ್ಲ. ಅಲ್ಲದೆ ಮುದುಕ ತಂದೆ. ಅಶಕ್ತ ಹೆಂಡತಿ. ಬರಗಾಲದ ಮಕ್ಕಳು.

ಮಂಜಿನ ನೀರು ಮಾಡಿ ಕುಡಿಯಹತ್ತಿದರು ಅಂತೂ ಒಂದೆರಡು ದಿನ ದೂಡಿದರು. ಇನ್ನೇನು ಮಾಡುವದೆಂದು ಹತಾಶರಾಗಿ ಕುಳಿತಿರುವಾಗ ಚಿಗಪ್ಪ ಒಬ್ಬ ಸಾವುಕಾರನನ್ನು ಕರೆದುಕೊಂಡು ಬಂದ. ಊರ ಶ್ರೀಮಂತ ರಿಗೆ ಭೂಮಿಯನ್ನು ಕೊಡಿಸಿ ಅವರ ನೆರವಿನಿಂದ ಬದುಕಿದ್ದ. ಅಷ್ಟು ಹೊತ್ತಿಗೆ ಲುಂಗನ ಇಬ್ಬರೂ ಮಕ್ಕಳು ಅಲ್ಲಿ ಬಂದರು. ಅವರಿಬ್ಬರೂ ಸೊರಗಿ ಕಡ್ಡಿಯಾಗಿದ್ದರು ವೆಂಗಲುಂಗನಿಗೆ ಎಂದೂ ಕಣ್ಣೀರು ಬಂದಿರ ಲಿಲ್ಲ. ಆ ಮಕ್ಕಳನ್ನು ನೋಡಿ ಆತನ ಕಣ್ಣು ಒದ್ದೆಯಾಯಿತು.

“ ನೀವೇನು ಕೊಡುವಿರಿ ?”

“ ಈ ಮಕ್ಕಳ ಸಲುವಾಗಿಯಾದರೂ ನಿಮಗಿಷ್ಟು ಹೆಚ್ಚು ಹಣ ಕೊಡಬೇಕೆಂದು ಮಾಡಿರುವೆ. ಎಕರೆಗೊಂದು ನೂರು ರೂಪಾಯಿ ಕೊಡುವೆ.”

“ ಇದೇನು ಮಹಾ, ಇದರ ಇಪ್ಪತ್ತುಪಟ್ಟು ಬೆಲೆ ಕೊಟ್ಟು ಕೊಂಡ ಭೂಮಿ ಇದು.” “ ನಾವೆಂದೂ ಭೂಮಿಯನ್ನು ಮಾರಲಾರೆವು. ಹೊಟ್ಟೆಗಿಲ್ಲದೆ ಸತ್ತರೂ ಚಿಂತೆ ಇಲ್ಲ ”

ಅಷ್ಟರಲ್ಲಿ ಓಲಾನಳು ಹೊರಬಂದು “ ಇದ್ದ ಭೂಮಿಯನ್ನೆಲ್ಲ ಮಾರಿ ಬಿಟ್ಟರೆ ತಿರುಗಿ ಬಂದಾಗ ನಾವೇನು ತಿನ್ನಬೇಕು ? ಆದರಿಂದ ನಮ್ಮಲ್ಲಿರುವ ಖುರ್ಚಿ, ಮೇಜು, ಕಪಾಟಗಳನ್ನು ಬೇಕಾದರೆ ಮಾರಿಬಿಡಿರಿ.”

ಚಿಗಪ್ಪ ಕೇಳಿದ :—“ ನಿಜವಾಗಿಯೂ ಊರು ಬಿಡುವಿರಾ ?”

“ಇದಕ್ಕೆ ನಾನೇನು ಕೊಡಬಲ್ಲೆ. ಹೆಚ್ಚೆಂದರೆ ಒಂದೆರಡು ರೂಪಾಯಿ.”

ಎರಡು ರೂಪಾಯಿಗೆ ಆ ಸಾಮಾನನ್ನೆಲ್ಲ ಮಾರಿ, ಅಷ್ಟರಿಂದಲೇ ಮಾರ್ಗಕ್ರಮಣ ಮಾಡುವದೆಂದು ನಿಶ್ಚಯಿಸಿದರು. “ ಹೇಗೇ ಆಗಲಿ, ತನ್ನ ಭೂಮಿ ತನ್ನ ಹತ್ತಿರವೇ ಉಳಿಯಿತಲ್ಲ” ಎಂದು ಸಮಾಧಾನದ ಉಸಿರೆಳೆದ.

೧೦

ಹೊರಡುವಾಗ ಮನೆಗೆ ಬೀಗ ಹಾಕುವ ಅವಶ್ಯಕತೆಯೂ ಇರಲಿಲ್ಲ. ಇದ್ದ ವಸ್ತ್ರ ತೊಟ್ಟುಕೊಂಡಿದ್ದರು. ಮಕ್ಕಳ ಕೈಯಲ್ಲಿ ತುಸು ಅಕ್ಕಿಯಿದ್ದ ಪಾತ್ರೆ. ಅವರ ನಡಿಗೆ ನೋಡಿದರೆ ಊರು ಮುಟ್ಟುವದೇ ದುಸ್ತರವೆಂದು ಹೇಳುವಂತಿತ್ತು. ಮಕ್ಕಳಿಬ್ಬರನ್ನೂ ವೆಂಗಲುಂಗ ಕರೆದುಕೊಂಡಿದ್ದ. ಆದರೇನು ? ತಂದೆ ಇನ್ನೇನು ಬೀಳುವುದರಲ್ಲಿದ್ದಾನೆಂದು ತಿಳಿದೊಡನೆಯೇ ಮಕ್ಕಳನ್ನು ಬಿಟ್ಟು ಮುದುಕನನ್ನೆತ್ತಿಕೊಂಡ. ಅಂತಹ ಚಳಿಗಾಲದಲ್ಲಿಯೂ ಅವರಿಗೆ ಬೆವರಿಟ್ಟಿತ್ತು. ಮಕ್ಕಳಿಬ್ಬರೂ ಚಳಿಯಿಂದ ನಡುಗುತ್ತಿದ್ದರು. ಮುಂದೆ ಬೇಕಾದಷ್ಟು ಅನ್ನ ಸಿಕ್ಕೀತೆಂದು ಮಕ್ಕಳಿಗೆ ಹೇಳಿ ನಡೆಯುವ ಆಸೆ ತೋರಿಸಿದ್ದರು.

ಅಂತೂ ಸಾವಕಾಶ ಶಹರ ಮುಟ್ಟಿದರು. ಮುದುಕನನ್ನು ಕೆಳಗಿಳಿಸಿ ಮಕ್ಕಳನ್ನೆತ್ತಿಕೊಂಡ. ಆಗ ಹತ್ತಿರದಲ್ಲಿಯೇ “ ಹ್ವಾಂಗನ ಮಂದಿರ”ವಿತ್ತು

ಬಾಗಿಲಲ್ಲಿ ಕೆಲ ಹೆಂಗಸರು ಹಾಗೂ ಗಂಡಸಗರು ಮಾಸಿದ ಬಟ್ಟೆಯನ್ನು ಹೊದೆದು ಅಸ್ತವ್ಯಸ್ತವಾಗಿ ಬಿದ್ದಿದ್ದರು. ಅವರ ತಮ್ಮೊಳಗೆ ಹೇಳುತ್ತಿದ್ದ ಈ ಮಾತು ಹ್ವಾಂಗನ ಕಿವಿಗೆ ಬಿತ್ತು "ಇನ್ನೂ ಬೇಕಷ್ಟು ಅಕ್ಕಿ ಇದೆ ಈ ಸಾವುಕಾರರ ಹತ್ತರ. ಎಳ್ಳಷ್ಟು ಕನಿಕರವಿಲ್ಲ ಈ ನೀಚರಿಗೆ. ಬಡಬಗ್ಗರು ಅನ್ನವಿಲ್ಲದೆ ಸಾಯುತ್ತಾರೆ. ಇವರು ಮಾತ್ರ ಅಕ್ಕಿಯಿಂದ ಹೆಂಡ ತಯಾರಿಸಿ ಸೇವಿಸುತ್ತಾರೆ."

"ನನ್ನಲ್ಲಿ ಶಕ್ತಿ ಇದ್ದರೆ ಈ ಮನೆಗೇ ಬೆಂಕಿ ಹಾಕುತ್ತಿದ್ದೆ. ನಾನು ಸತ್ತರೂ ಅಡ್ಡಿ ಇರಲಿಲ್ಲ."

ವೆಂಗಲುಂಗ ಅವರೊಡನೆ ಮಾತಾಡುವ ಗೋಜಿಗೆ ಹೋಗಲಿಲ್ಲ. ಆತ ತನ್ನ ಹಾದಿ ಹಿಡಿದು ಸಾಗಿದ್ದ. ಮುಂದೆ ಹೋಗುವಷ್ಟರಲ್ಲಿಯೇ ಜನಗಳ ಗುಂಪು ಹೋಗುತ್ತಿದ್ದುದನ್ನು ಕಂಡರು. ಅವರಲ್ಲೊಬ್ಬನಿಗೆ ಕೇಳಲು 'ಹತ್ತಿರದಲ್ಲಿಯೇ ಸ್ಟೇಶನ್ನಿದೆಯೆಂದೂ, ಈ ಜನವೆಲ್ಲ ಹೊಟ್ಟೆಗಿಲ್ಲದೆ ಊರು ಬಿಟ್ಟು ದಕ್ಷಿಣ ದೇಶಕ್ಕೆ ಹೋಗಲಿರುವರೆಂದೂ' ತಿಳಿದು ಬಂತು.

ವೆಂಗಲುಂಗ ರೇಲ್ವೆಯನ್ನಿನ್ನೂ ನೋಡಿರಲಿಲ್ಲ ಅದರ ಬಗ್ಗೆ ಜನ ಆಡಿಕೊಳ್ಳುವದನ್ನು ಮಾತ್ರ ಕೇಳಿದ್ದ. ನೂರಾರು ಡಬ್ಬಿಗಳು ಕೂಡಿರುತ್ತವೆಂದೂ, ಮನುಷ್ಯರಾಗಲೀ, ಪ್ರಾಣಿಗಳಾಗಲೀ ಎಳೆಯದೆ ನೀರಿನ ಉಗಿಯಿಂದಲೇ ನಡೆಯುತ್ತದೆಂದೂ ಆತನ ಕಿವಿಗೆ ಬಿದ್ದಿತ್ತು.

ತಾವೂ ರೈಲಿನಲ್ಲಿಯೇ ಹೋಗುವದುಚಿತವೆಂದು ಹೆಂಡತಿಯೆಡೆಗೆ ನೋಡಿದ. ಆಕೆಯ ಹೆಗಲ ಮೇಲೆ ಮಗಳ ಕುತ್ತಿಗೆ ನೇತಾಡುತ್ತಿತ್ತು. "ಆಕೆ ಸಾಯುವ ಸ್ಥಿತಿಯಲ್ಲಿತ್ತು."

ಇನ್ನೇನು ಒಂದು ದಿನವಾದರೆ ಎಲ್ಲ ಸಾಯಬೇಕಾದೀತು. ಅದಕ್ಕಾಗಿ ರೈಲಿನಿಂದಲೇ ಹೋಗುವದುಚಿತವೆಂದು ತೀರ್ಮಾನಿಸಿದ. ರೇಲ್ವೆಯ ಸಿಳ್ಳು ಕೇಳಿಸಿತು. ಹೇಗೋ ಒಂದು ಡಬ್ಬಿಯಲ್ಲಿ ಸೇರಿಕೊಂಡರು.

## ೧೧

ನೂರು ಮೈಲು ಪ್ರವಾಸ ಮಾಡಿದ ಮೇಲೂ ಆ ಎರಡು ರೂಪಾಯಿಯಲ್ಲಿ ಕೆಲ ತಾಮ್ರದ ಕಾಸುಗಳುಳಿದಿದ್ದವು. ರೈಲಿನಿಂದಿಳಿದೊಡನೆಯೇ ತುಸು ಹಣ ಕೊಟ್ಟು ಅನ್ನ ರೊಟ್ಟೆ ಕೊಂಡು ಮಗಳಿಗೆ ತಿನ್ನಿಸಿದ. ಮುಂ

ದೇನು ಮಾಡಬೇಕೆಂಬುವರ ಬಗ್ಗೆ ರೇಲ್ವೆಯಲ್ಲೇ ಒಂದು ನಿರ್ಧಾರಕ್ಕೆ ಬಂದಂತಿತ್ತು. ಇತರ ನಿರ್ಗತಿಕರಲ್ಲಿ ಈ ಬಗ್ಗೆ ಸಾಕಷ್ಟು ಚರ್ಚೆ ನಡೆದಿದ್ದಿತು.

"ಎರಡು ಬಿಲ್ಲಿಗೊಂದೊಂದು ಚಾಪೆ ಸಿಗುತ್ತಿದೆ ಅಲ್ಲಿ ೫-೬ ಚಾಪೆ ತೆಗೆದುಕೊಂಡರೆ ಒಂದು ಮನೆಯಾಯಿತು. —ಆ ಮೇಲೆ"

"ಕಾಲಿಗೆ ವಸ್ತ್ರ ಸುತ್ತಿಕೊಂಡೋ, ಅಥವಾ ಮೈಮೇಲೆಲ್ಲ ಮಂಣು ಹುಯ್ದುಕೊಂಡೋ ಬಿಕ್ಕೆ ಬೇಡಹತ್ತಿದರಾಯಿತು."

ಬಿಕ್ಕೇ ಬೇಡುವದೆಂದರೆ ವೆಂಗಲುಂಗನಿಗೆ ಸೇರದು. ಒಂದು ವೇಳೆ ಮುದುಕ, ಹೆಂಗಸರು ಬಿಕ್ಕೇ ಬೇಡಿದರೆ ಅಡ್ಡಿಯಿಲ್ಲ ನಾನು ಹೇಗೆ ಬೇಡುವುದು? ಅದಕ್ಕಾಗಿ ಆತ "ಅಲ್ಲಿ ಏನೂ ಕೆಲಸ ದೊರೆಯಲಾರದೆ?" ಎಂದು ಕೇಳಿದ.

"ಕೆಲಸಕ್ಕೇನು ಕೊರತೆ? ಯಾವುದಾದರೂ ಶ್ರೀಮಂತನಿಗೆ ಗಾಡಿಯಲ್ಲಿ ಕೂಡ್ರಿಸಿ ಬಿಸಿಲೆನ್ನದೆ ಓಡಾಡಿದರೆ ಒಂದೆರಡು ಕಾಸು ಸಿಗಬಹುದು. ಇದಕ್ಕಿಂತ ಸುಮ್ಮನೇ ಬಿಕ್ಕೇ ಬೇಡಿದರೇನು ಹಾನಿ?"

ಆತ ಮನದಣಿಯೆ ಊಟ ಮಾಡಿ ಚಾಪೆ ಕೊಂಡು ತಂದ. ಓಲಾನಳು ಅದರಿಂದೊಂದು ಮನೆ ಮಾಡಿದಳು. ಅಲ್ಲಿಯ ಭೋಜನಾಲಯದಲ್ಲಿ ಬಿಲ್ಲಿಗೊಂದು ತಾಟು ಅನ್ನ ಹಾಕುತ್ತಿದ್ದರು. ಯಾರಿಗೂ ಒಯ್ಯಲು ಮಾತ್ರ ಕೊಡುತ್ತಿರಲಿಲ್ಲ. ಯಾಕಂದರೆ ಇವೆಲ್ಲ ಶ್ರೀಮಂತರ ಜನರು ಬಡವರಿಗೆಂದು ಕಟ್ಟಿಸಿದ ಅನ್ನಸತ್ರವಾಗಿತ್ತು. ಹೊಗೆ ಒಯ್ಯಲು ಕೊಟ್ಟಿದ್ದರೆ ಜನರು ದನಕುರಗಳಿಗೂ ಅನ್ನವನ್ನೇ ತಿನ್ನಿಸುತ್ತಿದ್ದರೋ ಏನೋ? ಏಕಂದರೆ ಇಷ್ಟು ಅಗ್ಗವಾಗಿ ಇನ್ನೆಲ್ಲಿಯೂ ಅನ್ನ ದೊರೆಯುವಂತಿರಲಿಲ್ಲ.

ಬೆಳಿಗ್ಗೆ ಎದ್ದು ಯಾವುದಾದರೂ ಕೆಲಸಕ್ಕೆ ಹೋಗುವದೆಂದು ತೀರ್ಮಾನಿಸಿದ. ಯಾಕಂದರೆ ಆತನ ಹತ್ತರ ಒಂದು ಕಾಸೂ ಉಳಿದಿರಲಿಲ್ಲ. ಓಲಾನಳು ಮಾತ್ರ ಬಿಕ್ಕೆ ಬೇಡುವುದೇ ಸರಿಯೆಂದು ನಿಶ್ಚಯಿಸಿದಳು.

ಮಕ್ಕಳಿಗೂ ಹಾಗೇ ಬಿಕ್ಕೇ ಬೇಡಲು ಕಲಿಸಿದಳು. ಹಿರಿಯವನು ಮಾತ್ರ ಸಿದ್ಧನಾಗಲಿಲ್ಲ. ಹೊಡೆದು ಬಡೆದು ಆತನಿಗೆ ಬಿಕ್ಕೇ ಬೇಡಹಚ್ಚಿದಳು. ಮುದುಕನೂ ಬಿಕ್ಕೇ ಬೇಡಲು ತೊಡಗಿದ.

ವೆಂಗಲುಂಗ ಕೆಲಸಕ್ಕಾಗಿ ಅಲೆದ. ಎಲ್ಲಿಯೂ ಸಿಗದಿರಲು ರಿಕ್ಷಾ ಗಾಡಿ ಯೊಂದನ್ನು ಬಾಡಿಗೆಗೆ ತಂದುಕೊಂಡು ಶ್ರೀಮಂತರ ದಾರಿ ಕಾಯಹತ್ತಿದ. ದಿನವೊಂದಕ್ಕೆ ಎಂಟಾಣೆ ಬಾಡಿಗೆ ತೆರಬೇಕಾಗುತ್ತಿತ್ತು; ಕೊನೆಗೊಬ್ಬ ಮುದುಕ ಬಂದು "ಕನ್‌ಫ್ಯೂಸಿಯಸ್ ಮಂದಿರಕ್ಕೆ ತನ್ನನ್ನು ಕರೆದು ಕೊಂಡು ಹೋಗು" ಎಂದ.

ಈ ಕೆಲಸಕ್ಕಾಗಿ ಒಂದು ಬೆಳ್ಳಿಯ ನಾಣ್ಯ ಸಿಕ್ಕಿತು. 'ಇದಕ್ಕೂ ಹೆಚ್ಚು ಕೊಡಲಾರೆ' ಎಂದು ಆತ ಹೋದ. ಇತರ ಗಾಡಿಯವರು ಇವನೆಂತಹ ಅಡ ನಾಡಿ, ಇಂತಿಷ್ಟಕ್ಕಾದರೆ ಹತ್ತಿಸುತ್ತೇನೆ, ಇಲ್ಲವಾದರೆ ಇಲ್ಲ, ಎಂದು ಮೊದಲೇ ಮಾತಾಡಿಕೊಂಡು ಬರಬಾರದಿತ್ತೇ ಎಂದು ಗೊಣಗಾಡಿದರು. ಪಾಪ ಅವನಿ ಗೇನು ಗೊತ್ತು. ಅವನ ಜೀವನದಲ್ಲಿ ಇಂದಿನ ಅಧ್ಯಾಯ ಹೊಸದು.

ಸಂಜೆ ನೋಡಿದಾಗ ಬಾಡಿಗೆ ಹೋಗಿ ಒಂದೇ ಕಾಸು ಉಳಿದಿತ್ತು. ಓಲಾನಳು ಹುಡುಗರೆಲ್ಲ ಕೂಡಿ ೨೬ ದುಡ್ಡು ಬೇಡಿದ್ದರು. ಮುದುಕನಿಗೇ ಏನೂ ಸಿಕ್ಕಿರಲಿಲ್ಲ.

೧೨

ಆ ಊರಿನ ಪರಿಚಯ ಸಾಕಷ್ಟಾಗಿದೆ. ಇಲ್ಲಿಯ ಗಂಡಸರೆಲ್ಲ ಸಾಲೆ ಇಲ್ಲವೆ ಕಾರ್ಖಾನೆಗೆ ಹೋಗುವವರೆಂದೂ, ಹೆಂಗಸರೆಲ್ಲ ಹೆಚ್ಚಾಗಿ ಪೇಟೆಗೆ ಹೋಗುವವರೆಂದೂ ಆತನಿಗೆ ಗೊತ್ತಾಗಿದೆ. ಆದರೆ ಅವನಿಗೆ ಶಾಲೆ ಇಲ್ಲವೆ ಕಾರ್ಖಾನೆಯ ಬಗ್ಗೆ ಏನೇನೂ ಗೊತ್ತಿರಲಿಲ್ಲ. ಸಾಯಂಕಾಲ ಜನರು ಹೆಚ್ಚಾಗಿ ನಾಟಕ ಸಿನೇಮಾದಿಗಳಿಗೆ ಹೋಗುತ್ತಿದ್ದರು. ಇಂತಹ ಶ್ರೀಮಂತರು ಒಗೆದ ಕೂಲಿ ನಾಲಿಯಿಂದ ಜೀವಿಸಬೇಕಾಗಿತ್ತು. ಆತನಿಗೆ ತನ್ನ ಮನೆಯ ಹೊರತು ಇನ್ನಾರ ಮನೆಯ ಗುರುತೂ ಇರಲಿಲ್ಲ.

ಆ ಕಾಲದ ತರುಣರೆಲ್ಲ ಕ್ರಾಂತಿಯ ಮಾತಾಡುತ್ತಲೇ ಇರುತ್ತಿದ್ದರು. ವಿದೇಶಿಯರನ್ನು ಹೊರಹಾಕಿದ ಹೊರತು ತಮಗೆ ಸಾಧ್ಯವಿಲ್ಲವೆಂದು ಎನ್ನುತ್ತಿದ್ದರು. ವೆಂಗಲುಂಗನಿಗೆ ಭಯವಾಯಿತು. ಇಲ್ಲಿಯ ತರುಣರೆಲ್ಲ ತಮ್ಮನ್ನು ಹೊರಹಾಕಿದರೆ ತಮ್ಮ ಗತಿಯೇನು ಎಂದು ಕೊಂಡ. ಆದರೆ ಒಂದೆರಡು ದಿನದಲ್ಲಿಯೇ ವಿದೇಶೀಯರೆಂದರೆ ತಾವಲ್ಲ ಇನ್ನೂ ಬೇರೆ ಜನ ರಿದ್ದಾರೆಂದು ಆತನಿಗೆ ತಿಳಿದು ಬಂತು.

ಒಮ್ಮೆ ಆತ ರೇಶಿಮೇ ಅಂಗಡಿಯ ಹತ್ತಿರ ನಿಂತುಕೊಂಡಿದ್ದ. ಆಗ ಒಂದು ಚಿತ್ರವಿಚಿತ್ರ ವೇಷದ ವ್ಯಕ್ತಿ ಆತನ ರಿಕ್ಷಾಗಾಡಿಯನ್ನೇರಿತು. ಹೆಣ್ಣೋ ಗಂಡೋ ಎಂದು ಅವನಿಂದ ಕಂಡು ಹಿಡಿಯಲಾಗಲಿಲ್ಲ. ಉಳಿದ ಗಾಡಿಕಾರರೆಲ್ಲ ಇವನ ಭಾಗ್ಯ ತೆರೆಯಿತೆಂದು ತಿಳಿದುಕೊಂಡರು. ಆದರೆ ಆತನಿಗೆ ಆ ವ್ಯಕ್ತಿಯನ್ನು ಕಂಡು ತುಂಬ ಅಂಜಿಕೆ ಎನಿಸಿದ್ದರಿಂದ ವೇಗವಾಗಿ ಗಾಡಿಯನ್ನೆಳೆಯುತ್ತಿದ್ದ. ಕೊನೆಗೆ ಆಕೆ ಅಮೇರಿಕನ್ನ ಸ್ತ್ರೀಯೆಂದು ತಿಳಿದು ಬಂತು. ಗಾಡಿಯಿಂದಿಳಿದಾಗ ಎಲ್ಲರೂ ಕೊಡುವ ಹಣದ ಇಮ್ಮಡಿ ಹಣ ಆಕೆ ತೆತ್ತಿದ್ದಳು.

ಇಂತಹ ಜನರನ್ನು ಓಲಾನಳೂ ಅರಿತಿದ್ದಳು. ಆಕೆ ಹೆಚ್ಚಾಗಿ ಅಂತಹ ಜನದೊಡನೆಯೇ ಬೇಡುತ್ತಿದ್ದಳು. ಎಲ್ಲರೂ ತಾಮ್ರದ ಕಾಸು ಕೊಟ್ಟರೆ ಈ ಜನ ಬೆಳ್ಳಿಯ ನಾಣ್ಯವನ್ನು ಒಗೆಯುತ್ತಿದ್ದರು.

ಇಷ್ಟಾದರೂ ಅವರಿಗೆ ಮನೆಯ ಒಲೆಗೆ ಬೆಂಕಿ ಹಚ್ಚುವ ಸಮಯ ಬಂದಿರಲಿಲ್ಲ. ಮನೆಯಲ್ಲಿ ಅಡಿಗೆ ಮಾಡಿದರೆ ಅವರ ಉತ್ಪನ್ನ ಸಾಲುತ್ತಿರಲಿಲ್ಲ. ಓಲಾನಳು ಗುಡಿಸಲಲ್ಲಿ ಒಲೆಯನ್ನು ತಯಾರಿಸಿದ್ದಳು. ಅಲ್ಲಿಯ ಒಕ್ಕಲಿಗರಿಂದ ಒಂದೆರಡು ಕಟ್ಟಿಗೆಯ ಚೂರನ್ನೂ ಆಕೆ ಬೇಡಿಕೊಂಡಿದ್ದಳು. 'ಎಲ್ಲ ಕೆಲಸವನ್ನೂ ಹೊಟ್ಟೆ ಮಾಡಲು ಹಚ್ಚುತ್ತಿದೆ' ಎಂದು ಆಕೆ ನಂಬಿದ್ದಳು. ಯಾವ ಕೆಲಸಕ್ಕೂ ಹಿಂಜರಿದವಳಲ್ಲ ಆಕೆ. ಸೇವಾವೃತ್ತಿಯಲ್ಲಿಯೇ ಆಕೆಯ ದಿನಗಳೆಲ್ಲ ಕಳೆದಿದ್ದವು. ಎಂತಹ ಕಷ್ಟ ಬಂದರೂ ಹಿಂದಿನ ಕಷ್ಟದಂತಹ ಕಷ್ಟವಲ್ಲವೆಂದು ಆಕೆಗೆ ಖಚಿತವಾಗಿ ಗೊತ್ತು. ಅವಳು ಇಲ್ಲಿ ದುಡಿಯುತ್ತಿದ್ದುದು ತನಗಾಗಿ, ತನ್ನ ಮಕ್ಕಳುಗಳಿಗಾಗಿ.

ಈ ಕಾಲದಲ್ಲಿ ಮಕ್ಕಳು ಬೇಡುವುದಕ್ಕಿಂತ ಕಳವು ಮಾಡುವುದೇ ಸುಲಭವೆಂದು ಭಾವಿಸಿದ್ದರು. ಇದು ತಾಯಿಗೆ ಗೊತ್ತಿತ್ತು. ಆದರೆ ವೆಂಗಲುಂಗನಿಗೆ ಅದರ ಸುಳಿವಿರಲಿಲ್ಲ. ಒಮ್ಮೆ ಮನೆಗೆ ಬಂದಾಗ ಮಾಂಸದ ದೊಡ್ಡ ತುಂಡೊಂದು ಮನೆಯಲ್ಲಿ ಕಾಣಿಸಿತು. ಯಾವುದೋ ಅಮೇರಿಕನ್ನ ಸ್ತ್ರೀಯೊಡನೆ ಬೇಡಿ ತಂದದ್ದಿರಬೇಕೆಂದು ಆತ ಭಾವಿಸಿದ. ಆದರೆ ಮಕ್ಕಳು ತಮ್ಮ ಸಾಹಸದ ವರ್ಣನೆ ಮಾಡಿಕೊಳ್ಳುತ್ತಿದ್ದರು. ಅದನ್ನು ಕದ್ದು ತಂದವನು ಕಿರಿಯ ಹುಡುಗನಾಗಿದ್ದ. ವೆಂಗಲುಂಗ ಅದನ್ನು ತಿನ್ನಲು ಒಪ್ಪಲಿಲ್ಲ. ಆ ಪಾತ್ರೆಯನ್ನೇ ತೆಗೆದು ಹೊರಗೆ ಒಗೆದುಬಿಟ್ಟ.

ಓಲಾನಳು ಅದನ್ನು ತೊಳೆದು ಅಡಿಗೆ ಮಾಡಿದಳು. ಆದರೆ ವೆಂಗ ಲುಂಗ ತಿನ್ನಲಿಲ್ಲ. ಮಗನನ್ನು ಒಂದೆಡೆ ತೆಗೆದುಕೊಂಡು ಹೋಗಿ ಚನ್ನಾಗಿ ಥಳಿಸಿದ. ಆತನಿಗೆ ಇಲ್ಲಿರುವುದು ಹೇಯಯೆಂದೆನಿಸಿತು. ತನ್ನ ಊರಿಗೆ ಹೋಗುವುದೇ ವಾಸಿಯೆಂದು ಭಾವಿಸಿದ.

೧೩

ಎಲ್ಲರೂ ನಲಿವ ಆ ಬೆಡಗಿನ ಪಟ್ಟಣದಲ್ಲಿ ವೆಂಗಲುಂಗನಿಗೆ ನೋವೇ ನೋವು. ಆತನಿದ್ದ ನೆರೆಹೊರೆಯವರೆಲ್ಲರೂ ಅವನಂತೆ ನಿರ್ಗತಿಕರೇ ಆಗಿದ್ದರು. ಅವರ ಹೊಟ್ಟೆಗಿಷ್ಟು ಹಿಟ್ಟು, ಮೈಗಿಷ್ಟು ಬಟ್ಟೆ ದೊರೆಯುತ್ತಿರಲಿಲ್ಲ. ಗಂಡಸರು ಹೆಂಗಸರೊಂದಿಯಾಗಿ ಬೆಳಗಿನಿಂದ ಮಧ್ಯರಾತ್ರಿಯ ವರೆಗೆ ದುಡಿದು ಹೈರಾಣಾಗಿ ನೆಲದ ಮೇಲೆಯೇ ನಿದ್ದೆ ಹೋಗುತ್ತಿದ್ದರು. ಬೆಳಗ್ಗೆ ಏಳಲು ಸಹ ಚೈತನ್ಯವಿರುತ್ತಿರಲಿಲ್ಲ. ಚಳಿಗಾಲದಲ್ಲಂತೂ ಅವರ ದುರವಸ್ಥೆ ಹೇಳ ತೀರದು. ಮನೆಯ ಮಾಡೆಲ್ಲ ಬರ್ಫದಿಂದ ತೊಯ್ದಿರುತ್ತಿತ್ತು. ಓಲಾನಳು ಬೇಡಲು ಹೋಗುವಾಗ ಕಿರಿಯ ಮಗುವನ್ನು ಮುದುಕನ ವಶಕ್ಕೆ ಕೊಟ್ಟು ಹೋಗುತ್ತಿದ್ದಳು, ಪಾಪ! ಮುದುಕನಿಗಂತೂ ಮಕ್ಕಳಿಗಿಂತ ತಿನ್ನುಣುವ ಆಸೆ ಹೆಚ್ಚಾಗಿತ್ತು. ಈ ಎಲ್ಲ ಕಷ್ಟಕ್ಕಿಂತ ತನ್ನ ನಾಡೇ ಹಿತಕರವೆಂದು ವೆಂಗಲುಂಗನಿಗೆ ಅನಿಸಹತ್ತಿತ್ತು. ಆತ ತಂದೆಯ ಹತ್ತಿರ "ಅಪ್ಪಾ, ನಾವು ಊರಿಗೆ ಹೋಗಿ ಗದ್ದೆ ಬಿತ್ತಿದರೆ ಹೇಗೆ? ಇಲ್ಲಿಯ ಕಷ್ಟಕ್ಕಿಂತ ನಮ್ಮ ಊರಲ್ಲೇ ಸಾಯುವದಾದರೂ ಒಳಿತಲ್ಲವೇ?" ಎಂದ.

"ತಮ್ಮಾ ನನಗಿಂತಹ ಅನುಭವ ಹಿಂದೆ ಎರಡು ಸಲ ಬಂದು ಹೋಗಿದೆ. ಈಗ ಹೋಗಿ ಬಿತ್ತಲಿಕ್ಕೆ ಬೀಜವಾದರೂ ಎಲ್ಲಿದೆ?"

"ಏನು ಮಾಡಲಿ? ನನ್ನ ಹತ್ತಿರ ಮಾರುವೆನೆಂದರೂ ಒಂದು ಕವಡಿ ಕಿಮ್ಮತ್ತಿನ ವಸ್ತುವೂ ಇಲ್ಲ. ಅಂದರೆ ಅದನ್ನು ಮಾರಿಯಾದರೂ ಊರಿಗೆ ಹೋಗಬಹುದಿತ್ತು." ಒಬ್ಬನಾದರೂ ನಡೆದು ಹೋಗೋಣವೆಂದರೆ ಮಕ್ಕಳು ಮರಿಗಳೆಲ್ಲ ಚಿಕ್ಕವರು."

"ಈ ಹುಡುಗಿಯನ್ನಾದರೂ ಮಾರಿ ಬಿಡೋಣ"ವೆಂದು ಓಲಾನಳು ಸೂಚಿಸಿದಳು.

"ನನ್ನ ಹೊಟ್ಟೆಯ ಕರುಳನ್ನು ಹೇಗೆ ಮಾರಲಿ? ಅದನ್ನೆಂದಿಗೂ ಮಾಡಲಾರೆ."

" ನನ್ನ ಗತಿಯೂ ಹಾಗೇ ಆಗಿತ್ತು. ಊರಿಗೆ ತಿರುಗಿ ಹೋಗಲು ಕಾಸಿಲ್ಲದೆ ನನ್ನನ್ನು ಹೆತ್ತವರು ಮಾರಿ ಬಿಟ್ಟಿದ್ದರು."

" ಅದರ ಸೇಡನ್ನು ಈ ಮಗುವಿನ ಮೇಲೆ ತೀರಿಸಬೇಕೆಂದು ಮಾಡಿರುವಿಯಾ ?"

" ನನ್ನ ಸಲುವಾಗಿಯಾಗಿದ್ದರೆ ಮಾರುವುದಕ್ಕಿಂತ ಕೊಂದೇ ಹಾಕಿ ಬಿಡುತ್ತಿದ್ದೆ. ಎಷ್ಟೆಂದರೂ ನಾನು ಹುಟ್ಟಾ ದಾಸಿ. ಆದರೆ ಕೊಲ್ಲುವದರಿಂದೇನೂ ಲಾಭವಿಲ್ಲ. ನಿಮ್ಮ ಸಲುವಾಗಿ—ನೀವು ಕುಶಲದಿಂದ ಊರು ಮುಟ್ಟುವುದಕ್ಕಾಗಿ ಈ ಮಗಳನ್ನಾದರೂ ಮಾರಿ ಬಿಡೋಣ."

" ನಾನು ಇಲ್ಲಿಯೇ ಕೊಳೆತರೂ ಅಡ್ಡಿಯಿಲ್ಲ ಮಗಳನ್ನು ಮಾರಲಾರೆ. ಆದರೆ-ಆದರೆ—ಅಯ್ಯೋ ನಾನೇನು ನನ್ನ ಭೂಮಿಯನ್ನು ಇನ್ನು ಈ ಜನ್ಮದಲ್ಲಿ ಕಾಣಲಾರೆನೇ ?"

ಎಂದು ಉದ್ಗರಿಸಿದ. ನೀನೇ ಏಕೆ ? ನಿನ್ನಂತಹ ನೂರಾರು ಮಂದಿ ತಿರುಗಿ ಊರನ್ನು ಕಾಣಲಾರರು. ಎಂದು ಮನಸ್ಸು ಮಾರ್ನುಡಿಯಿತು.

ಹತ್ತಿರದಲ್ಲಿಯೇ ಒಬ್ಬ ಬಡಮನುಷ್ಯನಿದ್ದ. ಪಾಪ ! ಹಗಲಿನಲ್ಲಿ ನಿದ್ದೆ ತೆಗೆದು ರಾತ್ರಿಯೆಲ್ಲ ದುಡಿಯುತ್ತಿದ್ದ. ಕೆಲಸದ ಭಾರದಿಂದ ಸೊರಗಿದ್ದ. ಆತನೂ ವೆಂಗಲುಂಗನ ಬಳಿ ಒಮ್ಮೆ ಬಂದ. ತನ್ನ ಕರುಣಕಥೆಯನ್ನು ತೋಡಿಕೊಂಡ. " ಹಿಂದಿನ ಸಲ ಇಬ್ಬರು ಮಕ್ಕಳನ್ನು ಮಾರಿದ್ದೆ. ಈ ಸಲವೂ ಹೆಣ್ಣು ಹುಟ್ಟಿದರೆ ಮಾರದೇ ನಿರ್ವಾಹವಿಲ್ಲ. ಶ್ರೀಮಂತರು ಇನ್ನಷ್ಟು ಶ್ರೀಮಂತರಾದರೆ, ಬಡವರು ಇನ್ನಷ್ಟು ಬಡವರಾದರೆ ಹೊಸ ಉಪಾಯ ಸೂಚಿಸದೆ ಹೋಗುವದಿಲ್ಲ. ಯಾವುದಾದರೂ ಮಾರ್ಗ ಹೊಳೆದೇ ಹೊಳೆಯುತ್ತಿದೆ ಈ ಗೋಡೆಯಾಚೆ ಒಬ್ಬ ಶ್ರೀಮಂತರಿದ್ದಾರೆ. ಅವರಲ್ಲಿ ಲಕ್ಷ್ಮೀ ಕೈಕಾಲು ಮುರಿದುಕೊಂಡೇ ಬಿದ್ದಿದ್ದಾಳೆ. ಅದಕ್ಕಾಗಿ ಹೆಣ್ಣು ಮಕ್ಕಳನ್ನು ಕೊಂಡುಕೊಳ್ಳುವುದೇ ಅವರಿಗೊಂದು ಚಟವಾಗಿ ಬಿಟ್ಟಿದೆ. ತಾವೂ ಸಿಕ್ಕಾ ಬಟ್ಟೆ ತಿಂದು ಚಲ್ಲುತ್ತಾರೆ. ದಾಸ ದಾಸಿಯರನ್ನೂ ಸೌಖ್ಯವಾಗಿಟ್ಟಿದ್ದಾರೆ. ಇಲ್ಲಿಯೇ ನನ್ನ ಇಬ್ಬರು ಮಕ್ಕಳನ್ನು ಮಾರಿದ್ದೇನೆ—ಅದಕ್ಕೇ ದುಡ್ಡು ಹೆಚ್ಚಾದಲ್ಲಿ ಹೊಸ ಮಾರ್ಗದ ಶೋಧವಾಗುತ್ತಿದೆಯೆಂದು ಹೇಳುವುದು—ಆಗಲಿ, ಹೋಗು ಕೆಲಸ ನೋಡು. " ಎಂದು ಹೊರಟು ಹೋದ.

ಆ ರಾತ್ರಿಯೆಲ್ಲ ವೆಂಗಲುಂಗನಿಗೆ ನಿದ್ದೆ ಹತ್ತಲಿಲ್ಲ. ತನ್ನ ಮಗಳನ್ನು ಮಾರಿದರೇನು ಎಂಬುದೊಂದೇ ವಿಚಾರ ಸುಳಿಯುತ್ತಿತ್ತು. ಆಕೆಯೊಬ್ಬ ಳನ್ನು ಮಾರಿದರೆ ಬಂದ ಹಣದಿಂದ ಮನೆ ಮುಟ್ಟಬಹುದು. ದನ-ಕರ ಕೊಳ್ಳಬಹುದು ಮತ್ತೊಮ್ಮೆ ಸುಖಿಯಾಗಿ ಬಾಳಬಹುದು ಎಂದೆನಿಸುತ್ತಿತ್ತು

೧೪

ಈ ಬಡವರು ವಾಸವಾಗಿದ್ದ ಊರಿನಲ್ಲಿ ವಸಂತ ಋತುವಿನ ಆಗಮನ ವಾಯಿತು. ಈಗ ಅಲ್ಲಿಯ ಜನವೆಲ್ಲ ಗುಡ್ಡದ ಕಡೆ ಹೋಗಿ ಕಂದ ಮೂಲ ಗಳನ್ನು ಹಣ್ಣು ಹಂಪಲಗಳನ್ನು ದೊರಕಿಸುತ್ತಿದ್ದರು. ದಿನಾಲು ಬೆಳಿಗ್ಗೆ ಜನರು ತಂಡಕಟ್ಟಿ ಗುಡ್ಡದ ಬಳಿ ಹೋಗುತ್ತಿದ್ದರು ಓಲಾನಳೂ ಮಕ್ಕಳ ಸಂಗಡ ಅವರನ್ನು ಹಿಂಬಾಲಿಸುತ್ತಿದ್ದಳು. ಆದರೆ ವೆಂಗಲುಂಗನು ಮಾತ್ರ ತನ್ನ ಕಾಯಕವನ್ನು ಬಿಟ್ಟಿರಲಿಲ್ಲ.

ಅಲ್ಲಿಯ ಜನರ ಮುಖ್ಯ ಹೋರೆಯೆಂದರೆ ಕೂಲಿ, ಕುಂಬಳಿ; ಹೆಚ್ಚೆಂ ದರೆ ಬಿಕ್ಕೇ ಬೇಡುವುದು; ಕೈಯಲ್ಲಿ ಒಂದೆರಡು ಕಾಸಾಯಿತೆಂದರೆ ಜುಗಾರಿ ಆಡುವುದು, ಇಲ್ಲವೆ ಚಹಾ ಕುಡಿಯುವುದು. ಇಲ್ಲವೆ ಹರಟೆ ಹೊಡೆಯುವುದು. ಇವುಗಳಲ್ಲಿ ವೆಂಗಲುಂಗನಿಗೆ ಮನಸ್ಸಿರಲಿಲ್ಲ. ಯಾವಾ ಗಲೂ ತನ್ನ ಹೊಲಮನೆಯದೇ ಯೋಚನೆ. ಅಲ್ಲಿಯ ಜನರ ಹರಟೆಯಲ್ಲಿ ಹೆಚ್ಚಾಗಿ ಬರುವ ವಿಷಯವೆಂದರೆ ಒಂದು ಗೇಣು ನೀಟ ಮೀನದ ಬೆಲೆ ಯೇನು ? ವಸ್ತ್ರ ಹೇಗೆ ಕೊಂಡ? ಇತ್ಯಾದಿ.

ವೆಂಗಲುಂಗನೊಬ್ಬ ಏನೂ ತಿಳಿಯದ ಕುಣಬಿ ಎಂದು ಅವರ ಮತ. ಹಳ್ಳಿಯ ಕಂಚ, ಪಟ್ಟಣದ ಜೀವನವೆಂದರೇನು ಮಣ್ಣು ಗೊತ್ತು ?" ಎನ್ನುತ್ತಿದ್ದರು. ಇವಾವವುಗಳಿಂದಲೂ ವೆಂಗಲುಂಗನ ಮನಸ್ಸು ವಿಚಲಿತ ವಾಗುತ್ತಿದ್ದಿಲ್ಲ.

ವೆಂಗಲುಂಗ ಅನಕ್ಷರಸ್ಥ. ಅದಕ್ಕಾಗಿ ಊರಲ್ಲಿ ಹಂಚಿದ ಹಸ್ತಪತ್ರಿಕೆ ಗಳಾಗಲೀ, ಗೋಡೆಗೆ ಅಂಟಿಸಿದ ಭಿತ್ತಿಪತ್ರಿಕೆಗಳಾಗಲೀ ಓದಲು ಬರುತ್ತಿರ ಲಿಲ್ಲ. ಅವನಿಗೆ ಎರಡು ಸಲ ಈ ರೀತಿಯ ಕಾಗದ ಹಂಚಿದ್ದರು. ಒಮ್ಮೆ ಒಬ್ಬ ಪರದೇಶಸ್ಥ ಈ ಕಾಗದವನ್ನು ಕೊಟ್ಟಿದ್ದ. ಅದನ್ನು ತೆಗೆದುಕೊಳ್ಳಲಿಕ್ಕೂ ಆತನಿಗೆ ಅಂಜಿಕೆ. ಪತ್ರಿಕೆ ಹಂಚಿದವನು ಮುಂದೆ ಹೋದ ಬಳಿಕ ಸಾವಕಾಶ ವಾಗಿ ಬಿಚ್ಚಿ ನೋಡಿದ. ಅದರಲ್ಲಿ ಒಬ್ಬ ಬಿಳೇ ಮನುಷ್ಯನಿಗೆ ನೇಣುಹಾಕಿ

ದ್ದರು. ಆತನ ಮೈಮೇಲೆ ವಿಶೇಷ ವಸ್ತ್ರವಿರಲಿಲ್ಲ. ಕುತ್ತಿಗೆ ತೂಗಾಡುತ್ತಿತ್ತು. ಆತನ ಕಣ್ಣು ಕಂಡರೆ ಮೈ ಜುಮ್ಮೆನ್ನುತ್ತಿತ್ತು; ಆ ಚಿತ್ರದ ಕೆಳಗೆ ಏನೇನೋ ಬರೆದಿದ್ದರು. ಆದರೆ ಆತನಿಗೆ ತಿಳಿಯಲಿಲ್ಲ;

ವೆಂಗಲುಂಗ ಎಷ್ಟೋ ದಿನಗಳ ತನಕ ಆ ದಾರಿಯಾಗಿ ಹಾಯಲಿಲ್ಲ. ಆ ಕಾಗದದ ನೆನಪು ಹಾರಿ ಹೋದ ಮೇಲೆ ಮತ್ತೊಮ್ಮೆ ಹೋಗಿದ್ದ. ಆಗ ದೇಶೀ ತರುಣನೊಬ್ಬ ಮತ್ತೊಂದು ಕಾಗದ ಕೊಟ್ಟ. ಅದರಲ್ಲಿಯೂ ಹಿಂದಿ ನಂತಹದೇ ದೃಶ್ಯ ಚಿತ್ರಿಸಲ್ಪಟ್ಟಿತ್ತು. ಆದರೆ ಆ ಮನುಷ್ಯನ ಎದೆಯ ಮೇಲೆ ಇನ್ನೊಬ್ಬ ಕುಳಿತು ಚೂರಿಯಿಂದ ಇರಿಯುತ್ತಿದ್ದ. ಆ ಚಿತ್ರವನ್ನು ವೆಂಗ ಲುಂಗ ದಿಟ್ಟಿಸಿ ನೋಡಿ ಹತ್ತಿರಿದ್ದವನೊಡನೆ "ಇದರ ಅರ್ಥವನ್ನಷ್ಟು ವಿವರಿಸಿ ಹೇಳುವಿರಾ ?" ಎಂದು ಕೇಳಿದ.

"ಸುಮ್ಮನೆ ಕೇಳು. ಆ ತರುಣನೇ ಎಲ್ಲವನ್ನೂ ತಿಳಿಸಿ ಹೇಳುವನು."

ಆತ ತಣ್ಣಗೆ ಕೇಳುತ್ತ ಕುಳಿತ. ಈ ರೀತಿಯ ಮಾತನ್ನು ಆತ ಹಿಂದೆಂದೂ ಕೇಳಿರಲಿಲ್ಲ "ಈ ಸತ್ತ ಮನುಷ್ಯನೆಂದರೆ ಇನ್ನಾರೂ ಅಲ್ಲ; ನೀವೇ ಇರುವಿರಿ. ಈ ಕೊಲೆಗಡಕನೆಂದರೇ ಭಾಂಡವಲದಾರ. ನೀವು ಸತ್ತರೂ ಆತ ಹೊಡೆಯುವದನ್ನು ಬಿಡುತ್ತಿರಲಿಲ್ಲ. ಈ ಶ್ರೀಮಂತರು ನಿಮ್ಮಲ್ಲಿ ದ್ದುದನ್ನೆಲ್ಲ ದೋಚಿಯೇ ತಮ್ಮ ಬೊಜ್ಜ ಬೆಳೆಸಿದ್ದಾರೆ."

ವೆಂಗಲುಂಗನಿಗೆ ಇವೆಲ್ಲ ಹೊಸತು. ಮಳೆ ಬಂದರೆ ಎಲ್ಲವೂ ಸರಿ ಹೋಗುತ್ತದೆಂದು ಆತನ ತಿಳಿವಳಿಕೆ. "ಹಾಗಾದರೆ ನಮಗೆ ತೊಂದರೆ ಕೊಡುವ ಶ್ರೀಮಂತರು ಮಳೆ ತರಿಸುವಂತೆ ಯಾವುದಾದರೂ ಉಪಾಯ ಮಾಡಬಾರದೇ ?" ಎಂದು ಕೇಳಿ ಬಿಟ್ಟ.

ಉಳಿದವರಾರಿಗೂ ಈ ವಿಚಾರ ಸರಿ ಹೋಗಲಿಲ್ಲ. "ಎಲಾ ಮಂಕೇ ನಿನಗದೊಂದೂ ತಿಳಿಯದು. ಮಳೆ ಯಾರಿಂದಲೂ ತರಿಸಲು ಶಕ್ಯವಿಲ್ಲ. ಆದರಿಂದೇನು ? ಶ್ರೀಮಂತರೆಂಬುವವರು ತಮ್ಮ ಹತ್ತಿರಿದ್ದ ಧನದಲ್ಲಿ ತುಸು ನಮಗೆ ಕೊಡಲಿ. ಆಗ ಮಳೆ ಬಿದ್ದರೂ ಒಂದೇ, ಬರದಿದ್ದರೂ ಒಂದೇ."

ಲುಂಗನಿಗೆ ಇದರಿಂದೇನೂ ಸಮಾಧಾನವಿಲ್ಲ. ಓಲಾನಳ ಹತ್ತಿರ "ಮೊಚ್ಚೆಯಲ್ಲಿ ಹಾಕಲು ಇದೋ ಇನ್ನಿಷ್ಟು ಕಾಗದ ಇದೆ" ಎಂದ.

ಆದರೆ ಆ ಊರಲ್ಲಿಯ ಇತರ ಕೂಲಿಕಾರರೆಲ್ಲ ಆತನ ಮಾತನ್ನು ಲಕ್ಷ್ಯಗೊಟ್ಟು ಆಲಿಸುತ್ತಿದ್ದರು. ಅವರಿಗೆ ತಮ್ಮ ನೆರೆಯಿಲ್ಲಿದ್ದ ಶ್ರೀಮಂತ

ಏನೂ ಕೆಲಸ ಮಾಡದೆ ಸೌಖ್ಯದಿಂದ ಇದ್ದುದನ್ನು ಅರಿತಿದ್ದರು. ತಾವೆಲ್ಲ ಒಂದಾದರೆ ಅವನ ಮನೆಯನ್ನು ಲೂಟಿಮಾಡುವುದಕ್ಕೆ ಹೆಚ್ಚಿನೂ ಹೊತ್ತು ಹಿಡಿಯುವಂತಿರಲಿಲ್ಲ. ಮೊದಲೇ ಅಶಾಂತಿಯಿಂದ ಕೂಡಿದ ಆ ಜನತೆಯಲ್ಲಿ ಇನ್ನೊಂದು ಅಸಮಾಧಾನ ಒಡಮೂಡಿತು ದಿನಾಲು ಅವರು ಇದೇ ಚರ್ಚೆ ನಡಿಸಹತ್ತಿದರು. ವೆಂಗಲುಂಗನಿಗೆ ಅದನ್ನು ಕೇಳಿ ಕೇಳಿ ಬೇಸರ ಬಂದಿತು.

ವೆಂಗಲುಂಗ ಒಂದು ದಿನ ತನ್ನ ಗಾಡಿ ಹಿಡಿದು ನಿಂತಿದ್ದ. ಅಷ್ಟೊತ್ತಿಗೆ ಕೆಲ ಸಿಪಾಯಿಗಳು ಬಂದು ಒಬ್ಬನನ್ನು ಬಂಧಿಸಿದರು. ಆತ ಒಲ್ಲೆನ್ನಲು ಆತನಿಗೆ ಚೂರಿಯಿಂದ ಇರಿದು ಕೊಂದುಬಿಟ್ಟರು. ಹೀಗೆಯೇ ಹಲವಾರು ಮಂದಿಯನ್ನು ಬಂಧಿಸಿದರು. ಅವರೆಲ್ಲ ಅವನ ನೆರೆಯಲ್ಲಿದ್ದ ಕೂಲಿಕಾರ ರಾಗಿದ್ದರು.

ಯಾವ ಅಪರಾಧಕ್ಕಾಗಿ ಅವರನ್ನು ಬಂಧಿಸಿದರೆಂಬುದನ್ನು ಯಾರೂ ಅರಿಯರು. ತನ್ನ ಪಾಳಿಯೆಲ್ಲಿಯಾದರೂ ಬಂದೀತೆಂದು ಅಲ್ಲಿಯೇ ನುಸುಳಿ ಒಂದು ಅಂಗಡಿಯ ಮರೆಗೆ ಹೋಗಿ ನಿಂತ. ಆ ಅಂಗಡಿಕಾರನೊಬ್ಬ ಮುದುಕ. ದಯಾಳುವಾದುದರಿಂದ ವೆಂಗಲುಂಗನನ್ನು ಒಳಗೆ ಬರಲು ಹೇಳಿ ತನಗೆ ಗೊತ್ತಿದ್ದ ಸಂಗತಿಯನ್ನೆಲ್ಲ ಹೇಳಿದ.

“ ಎಲ್ಲಿಯೋ ಯುದ್ಧವಾಗುತ್ತಿರಬೇಕೋ ? ಯಾಕೆ ಲಡಾಯಿ ಮಾಡಿ ಸಾಯುತ್ತಾರೋ ಏನೋ ? ಹಿಂದೆಯೂ ಯುದ್ಧದ ಸುದ್ದಿ ಕೇಳಿದ್ದೆ. ಇದು ಯಾವಾಗಲೂ ಬರುತ್ತಿರುವ ರೋಗವೆಂದೇ ಕಾಣುತ್ತಿದೆ. ಆ ಯುದ್ಧದಲ್ಲಿ ಅನೇಕ ಸಿಪಾಯಿಗಳಿರತ್ತಾರೆ. ಅವರಿಗೆ ವಸ್ತ್ರ ಒಗೆಯುವದು ಇಲ್ಲವೆ ಅಡಿಗೆ ಮಾಡುವುದು ಇತ್ಯಾದಿ ಕೆಲಸಕ್ಕೆ ಜನ ಬೇಕಾಗುತ್ತಿದೆ. ಆ ಕೆಲಸಗಾರರಿಗೆ ಹೊಟ್ಟೆಗೂ ಪೂರಾ ಕೊಡುವದಿಲ್ಲ. ಕೆರೆ ನೀರು ಜೋಳದ ಬಕರಿ ” ಎಂದ.

ಪೋಲೀಸರೆಲ್ಲ ಹೊರಟುಹೋದ ಮೇಲೆ ವೆಂಗಲುಂಗ ಅಲ್ಲಿಂದ ಹೊರಬಿದ್ದ. ಆತ ಹೇಗೆ ಹೇಗೋ ಮನೆ ಮುಟ್ಟಿ, ನಡೆದ ಸಂಗತಿಗಳನ್ನೆಲ್ಲ ಓಲಾನಳಿಗೆ ವಿವರಿಸಿದ. “ ಮಗಳನ್ನು ಮಾರಿ ನಾಳೆಯೇ ಇಲ್ಲಿಂದ ಹೊರ ಡೋಣ ” ಎಂದ.

“ ಇನ್ನೂ ತುಸುದಿನ ತಡೆಯಿರಿ. ಏನೇನೋ ಸಂಗತಿ ನಡೆಯಲಿದೆ ” ಎಂದಳು.

ಈಗ ಹಗಲಿನಲ್ಲಿ ಕೆಲಸಕ್ಕೆ ಹೊರಡುತ್ತಿರಲಿಲ್ಲ. ಬಾಡಿಗೆ ತಂದ ಗಾಡಿ ಯನ್ನು ಹಿಂದಕ್ಕೆ ಕಳಿಸಿದ. ರಾತ್ರಿ ಕಾರಖಾನೆಯಲ್ಲಿ ಕೆಲಸಕ್ಕೆ ಸೇರಿದ.

ದಿನಾಲು ಮೈಮುರಿಯ ದುಡಿತ. ಬೇಕು ಬಿಡುವಷ್ಟರಲ್ಲಿ ಗುಡಿಸಲಿಗೆ ಬಂದು ಸೇರಿ ನಿದ್ದೆ ಹೋಗುತ್ತಿದ್ದ. ಎಷ್ಟೊತನೆಯೋ ಮಕ್ಕಳು ಊರಲ್ಲಿ ನಡೆದ ಒಂದಲ್ಲ ಒಂದು ಸುದ್ದಿ ತಂದು ಹೇಳುತ್ತಿದ್ದರು. ಆತನ ಮನಸ್ಸಿನಲ್ಲಿ ಮಗಳನ್ನು ಮಾರಿಯಾದರೂ ಊರು ಸೇರೋಣ ಎಂದಿತ್ತು.

" ಹ್ವಾಂಗ ಮಂದಿರದಲ್ಲಿ ನಿನಗೆಂದಾದರೂ ಬಡಿತ ಬೀಳುತ್ತಿತ್ತೆ ? " ಎಂದು ಓಲಾನಳಿಗೆ ಕೇಳಿದ.

" ದಿನಾಲು ಬೀಳುತ್ತಿತ್ತು. "

" ಬೆತ್ತದಿಂದಲೋ, ವಸ್ತ್ರದ ಮುರಿಗೆಯಿಂದಲೋ, ಏತರಿಂದ ? "

" ಬಾರಕೋಲಿನಿಂದ. "

" ನಮ್ಮ ಮಗಳು ಸುಂದರಳಿದ್ದಾಳೆ. ಅಂತಹಳಿಗೆಂದೂ ಹೊಡೆಯಲಾರರು. "

"ಪೆಟ್ಟು ಇಷ್ಟೇ ಅಲ್ಲ; ಅಂತಹರ ಮೇಲೆ ಅತ್ಯಾಚಾರ ನಡೆಯುತ್ತಿತ್ತು."

ಹೀಗೆ ಮಾತಾಡುತ್ತಿರುವಷ್ಟರಲ್ಲಿ ನೆರೆಯಲ್ಲಿಯೇ ಗದ್ದಲ ಕೇಳಿಸ ತೊಡಗಿತು. ಮಕ್ಕಳೆಲ್ಲ ಚೀರ ತೊಡಗಿದರು. ಓಲಾನಳು ಮಾತ್ರ " ಹೀಗಾ ಗುವದೆಂದು ನನಗೆ ಗೊತ್ತೇ ಇತ್ತು. ಶತ್ರುಗಳು ಈ ನಗರವನ್ನು ಪ್ರವೇಶಿ ಸಿದರು " ಎಂದಳು.

ಆತನ ರೋಮರೋಮದಲ್ಲೆಲ್ಲ ವಿಚಿತ್ರ ಭಯವ್ಯಾಪಿಸಿತು. ತನ್ನ ಮಗಳಂದಿರನ್ನು ಮಾರಿದೆನೆಂದು ಹೇಳಿದ ಮನುಷ್ಯ ಬಂದು "ಅಯ್ಯೋ ಇನ್ನೂ ಸುಮ್ಮನೇ ಕುಳಿತಿರುವೆಯಾ ? ಶ್ರೀಮಂತರ ಮನೆಯಲ್ಲ ನಮ್ಮ ಕೈವಶವಾಗಿವೆ. ಬಾ, ಸಿಕ್ಕಷ್ಟು ದೋಚಿಕೊಳ್ಳಲು ಇದೇ ಸಮಯ " ಎಂದು ಕೂಗಿದ.

ವೆಂಗಲುಂಗನೂ ಎದ್ದು ಅವನನ್ನು ಹಿಂಬಾಲಿಸಿದ. ಬಡಬಗ್ಗರ ತಂಡ ಶ್ರೀಮಂತನ ಮನೆಯನ್ನು ನುಗ್ಗುತ್ತಲಿತ್ತು. ಅವರ ಜೊತೆಗೆ ವೆಂಗಲುಂಗನೂ ಒಳಹೊಕ್ಕು ಜನವೆಲ್ಲ ಬೆಳ್ಳಿ ಬಂಗಾರ ತುಂಬಿದ ಪೆಟ್ಟಿಗೆ ಯತ್ತಹೋಗಿ ವಶಪಡಿಸಿಕೊಳ್ಳಹತ್ತಿದರು. ಪಾಪ! ವೆಂಗಲುಂಗನಿಂದ ಮಾತ್ರ ಮುಂದರಿ ಯಲಾಗಲಿಲ್ಲ. ಹೆರವರ ಹೊನ್ನನ್ನು ಕನಸಿನಲ್ಲಿಯೂ ಬಯುಸಿರಲಿಲ್ಲ. ಹೆಂಗ ಸರು ವಾಸಿಸುವ ಕೋಣೆಯ ಬಳಿಯಲ್ಲಿ ಆತ ನಿಂತಿದ್ದ. ಜೀವ ಉಳಿದರೆ ಸಾಕೆಂದು ಮನೆಯೊಳಗಿನ ಜನ ಓಡಿಹೋಗಿದ್ದರು. ಒಬ್ಬ—ಜಡದೇಹಿ ಮಾತ್ರ ಏಳಲಾಗದೆ—ಹೆಂಗುಸಿನ ಸಂಗ ಸುಖ ಬಿಡಲಾರದೆ—ಅರೆಮನಸ್ಸಿ

ನಿಂದ ಬಿದ್ದಿದ್ದ. ವೆಂಗಲುಂಗನನ್ನು ಕಂಡು ಆತ ಚೀರಿದ. " ನನ್ನನ್ನು ಕೊಲ್ಲ ಬೇಡಪ್ಪಾ, ನಿನಗೆ ಬೇಕಷ್ಟು ಬಂಗಾರ ಕೊಡುವೆ. "

" ಬಂಗಾರ ಕೊಡುವಿಯಾ ? "—ಮನೆಯ ಚಿತ್ರವೆಲ್ಲ ವೆಂಗಲುಂಗನ ಕಣ್ಣೆದಿರು ಬಂದಿತು. ಅಷ್ಟರಲ್ಲಿ ಆತ ಕೆಲವು ಹಣ ತಂದು ಲುಂಗನ ಜೇಬಿನಲ್ಲಿ ತುಂಬಿದ.

" ಹೂಂ, ಸಾಕಾಗದು. ಇನ್ನೂ ತಾ. "

" ಮಾರಾಯಾ, ಇನ್ನೇನಿಲ್ಲ ದಮ್ಮಯ್ಯ. ನನ್ನ ಜೀವದ ಹೊರತು ಇನ್ನೇನೂ ಇಲ್ಲ. "

ಲುಂಗನ ಕಣ್ಣು ಒಪ್ಪಿಯಾಯಿತು. ನನ್ನ ಮುಂದೆ ನಿಲ್ಲಬೇಡ ಇದೀಗ ಹೊರಟು ಹೋಗು. "

ಲುಂಗನು ಹಣವನ್ನೆಣಿಸಲಿಕ್ಕೂ ನಿಲ್ಲಲಿಲ್ಲ. ಹಣದ ಕಿಸೆಯನ್ನು ಗಟ್ಟಿಯಾಗಿ ಹಿಡಿದುಕೊಂಡು ತನ್ನ ಗುಡಿಸಲಿಗೆ ಹೋದ. "ಹೇಗಾದರೂ ನಾಳೆ ಮನೆಗೆ ಹೋಗುವೆನೆಂದು ಯೋಚಿಸಿಕೊಂಡ."

## ೧೫

ಆತ ಊರಿಗೆ ತಿರುಗುವಾಗ ದಾರಿಯಲ್ಲಿಯೇ ಮೂರು ಹೊನ್ನು ಕೊಟ್ಟು ಬೀಜ ಕೊಂಡ. ಇನ್ನೊಬ್ಬನಿಗೆ ಐದು ಹೊನ್ನು ಕೊಟ್ಟು ಎತ್ತಿನ ಜೋಡಿ ಕೊಂಡ. ಮುಗದಾಣ ಹಿಡಿದು ಮನೆಯ ಹಾದಿ ಹಿಡಿದರು.

ಅಲ್ಲಿ ಹೋಗಿ ನೋಡಲು ಮನೆಗೆ ಕಿಡಕಿ ಬಾಗಿಲುಗಳೇನೂ ಇರಲಿಲ್ಲ. ಗೋಡೆ ಮಾತ್ರ ಇತ್ತು. ಪೇಟೆಗೆ ಹೋಗಿ ಅವಶ್ಯಕ ಸಾಮಾನು ತಂದು ಮನೆಯನ್ನು ಹೊಚ್ಚಿದರು. ಅವನಿಗೆ ತನ್ನ ಹೊಲದ್ದೇ ಚಿಂತೆ. ಅದನ್ನು ಕಣ್ಣಾರೆ ಕಂಡ ಹೊರತು ಇತರರೊಡನೆ ಮಾತಾಡುವ ಮನಸ್ಸಿರಲಿಲ್ಲ. ಹೀಗಾಗಿ ಆತ ನೇರವಾಗಿ ಹೊಲಕ್ಕೆ ಹೋದ.

ಸಾಯಂಕಾಲ ಚಿಂಗ ಅವನಲ್ಲಿಗೆ ಬಂದ. " ಏನು ಹೇಳಲಪ್ಪಾ, ಕಳ್ಳರೆಲ್ಲ ಬಂದು ಇಡೀ ವರ್ಷ ನಿನ್ನ ಮನೆಯಲ್ಲೇ ಉಳಿದು ಊರೆಲ್ಲ ಲೂಟಿ ಮಾಡಿಯೇ ಮಾಡಿದರು. ನಿನ್ನ ಚಿಗಪ್ಪ ಆ ಕಳ್ಳರ ಸಂಗಡಕ್ಕೇ ಸೇರಿದ್ದ. ಆಗಲಿ, ಕಾಲವೇ ಹಾಗೆ ಬಂದು ಹೋಯಿತು. ಯಾರ ಮೇಲೆ ತಪ್ಪು ಹೇಳಿ ಏನುಪಯೋಗ ?"

ವೆಂಗ ತಂದ ಬೀಜದಲ್ಲಿ ತುಸು ಬೀಜವನ್ನು ಚಿಂಗನಿಗೆ ಕೊಟ್ಟು, ಸಾಯಂಕಾಲ ಬಂದು ನಿನ್ನ ಭೂಮಿಯನ್ನು ಉತ್ತುಕೊಡುತ್ತೇನೆಂದು ಹೇಳಿದ.

ಚಿಂಗನ ಹೃದಯ ತುಂಬಿ ಬಂತು. ವೆಂಗನ ಚಿಗಪ್ಪ ಎಲ್ಲಿಯೋ ಹೋಗಿದ್ದುದರಿಂದ ಕಾಟ ತಪ್ಪಿತೆಂದು ಸಂತೋಷಪಟ್ಟ. ಹೊಲದಲ್ಲಿ ಕಷ್ಟ ಪಟ್ಟು ದುಡಿಯಹತ್ತಿದ. ಓಲಾನಳೂ ತಂಣಗೆ ಕೂತಿರುತ್ತಿದ್ದಿಲ್ಲ. ಮನೆಯನ್ನೆಲ್ಲ ಸರಿಪಡಿಸಹತ್ತಿದಳು. ಒಂದು ದಿನ ಗಂಡನ ಜೊತೆಗೆ ಹೋಗಿ ಮೇಜು, ಖುರ್ಚಿಗಳನ್ನೆಲ್ಲ ಕೊಂಡು ತಂದಳು. ದೇವರಿಗೆ ಪುನಃ ಆರತಿ ದೂಪ ದೀಪಗಳಾಗಹತ್ತಿದವು.

೧೬

ಒಮ್ಮೆ ಹೆಂಡತಿಯ ಜೊತೆಗಿದ್ದಾಗ ಆಕೆಯ ಕುತ್ತಿಗೆಯ ಹತ್ತಿರ ಹಿಡಿಯಷ್ಟು ಗಾತ್ರದ ವಸ್ತ್ರದ ಗಂಟಿತ್ತು. ಅದರಲ್ಲಿದ್ದುದನ್ನು ತೋರಿಸಲು ಓಲಾನಳು ಮೊದಮೊದಲು ಒಪ್ಪದಿದ್ದರೂ ಕೊನೆಗೆ ಒಪ್ಪಲೇ ಬೇಕಾಯಿತು. ಅದರಲ್ಲಿ ಅಮೂಲ್ಯ ರತ್ನಗಳಿದ್ದವು.

" ನಿನಗೆಲ್ಲಿ ದೊರಕಿತು ? "

" ಅದೇ ಶ್ರೀಮಂತನ ಮನೆಯಲ್ಲಿ. ಬೇರೆಯುವರಾರೂ ನೋಡಿ ಪಾಲು ಬೇಡಬಾರದೆಂದು ಬಚ್ಚಿಟ್ಟಿದ್ದೆ. "

" ಹೀಗೆಯೇ ಇದನ್ನು ನಾವು ಸಂಭಾಳಿಸಲಾರೆವು. ಇದನ್ನೆಲ್ಲ ಮಾರಿ ಭೂಮಿಯನ್ನು ಕೊಂಡರೆ ನಮಗೆ ಯಾವುದೇ ರೀತಿಯ ಕೊರತೆಯಾಗಲಿಕ್ಕಿಲ್ಲ. "

ಎರಡು ಮುತ್ತನ್ನು ಮಾತ್ರ ತನ್ನಲ್ಲಿಟ್ಟುಕೊಂಡು ಉಳಿದುದೆಲ್ಲವನ್ನೂ ಆಕೆ ಗಂಡನಿಗೆ ಕೊಟ್ಟಳು. ಆತ ನೇರವಾಗಿ ಹ್ವಾಂಗ ಮಂದಿರಕ್ಕೆ ಹೋದ. ಅಲ್ಲಿ ಬಾಗಿಲ ಕಾಯುವವನಿದ್ದಿಲ್ಲ. ಬಾಗಿಲ ಮುಚ್ಚಿದ್ದಿತು. ಬಾಗಿಲ ತಟ್ಟಿದರೂ ಯಾರ ಸುಳುವೂ ಹತ್ತಲಿಲ್ಲ. ಕೊನೆಗೆ ಯಾರೋ ಬರುತ್ತಿರುವ ಸಪ್ಪಳ ಕೇಳಿಸಿತು.

" ಯಾರಲ್ಲಿ ? "

" ನಾನು, ವೆಂಗಲುಂಗ "

" ವೆಂಗಲುಂಗ—ಎಂದರೆ ? "

" ದನಿಯರೇ, ನಾನೊಂದು ಕೆಲಸಕ್ಕಾಗಿ ನಿಮ್ಮಲ್ಲಿ ಬಂದಿರುವೆ. ನಿಮಗೇನೂ ತೊಂದರೆ ಕೊಡುವ ಇಚ್ಛೆಯಿಲ್ಲ. ವ್ಯವಸ್ಥಾಪಕನ ಭೆಟ್ಟಿಯಾದರೆ ಸಾಕು. "

" ಅವನಿಲ್ಲ. ಆ ಘಟಿಂಗ ಬಿಟ್ಟು ಹೋಗಿ ಎಷ್ಟೋ ದಿನವಾಯಿತು."

" ಹಾಗಾದರೆ ನಾನು ಹಣದ ವ್ಯವಹಾರದ ಸಲುವಾಗಿ ಬಂದಿದ್ದೆ."

ಆತ ಬಾಗಿಲ ತೆರೆದು ಹೊರಬಂದ " ನನ್ನ ಹತ್ತರ ಏನೂ ಉಳಿದಿಲ್ಲ. ಇದ್ದುದನ್ನೆಲ್ಲ ವ್ಯವಸ್ಥಾಪಕನೇ ದೋಚಿಕೊಂಡ."

" ಹಾಗಲ್ಲ; ಹಾಗಲ್ಲ; ನಾನು ರೂಪಾಯಿ ಕೊಡಲಿಕ್ಕೆ ಬಂದವನೇ ಹೊರತು ತೆಗೆದುಕೊಳ್ಳಲಿಕ್ಕಲ್ಲ" ಅಷ್ಟರಲ್ಲಿತ್ತಿಗೆ ಒಬ್ಬ ರಮಣಿಯು ಬಂದು " ಹಾಗಾದರೆ ಒಳಗೆ ಬಾ" ಎಂದಳು.

ವೆಂಗಲುಂಗ ಒಳಹೊಕ್ಕ ನೋಡಿದ. ಅಲ್ಲಿ ಅವರಿಬ್ಬರ ಹೊರತು ಇನ್ನಾರೂ ಇರಲಿಲ್ಲ.

"ಹಾಗಾದರೆ ನಿನ್ನಲ್ಲಿಷ್ಟು ಹಣ ಇದೆ ಹೇಳು, ನಿನಗೇನು ಬೇಕಾಗಿದೆ?" ಎಂದು ಕೇಳಿದಳು. ಆ ಮುದುಕ ಆಕೆಯ ಸನ್ನೆಯಂತೆ ಒಳಗೆ ಹೋದ.

" ಆದರೆ ಇವನ್ನೆಲ್ಲ ನಾನು ಪರಕೀಯ ಸ್ತ್ರೀಯೊಡನೆ ಹೇಗೆ ಹೇಳಲಿ?"

" ಈ ಮನೆಯಲ್ಲಿ ಇನ್ನಾರೂ ಇಲ್ಲವೆಂದು ಅರಿಯೆಯಾ ? ಈಗಿದ್ದವರು ನಾವಿಬ್ಬರೇ ?"

" ಹಾಗಾದರೆ ಯಜಮಾನತಿಯೆಲ್ಲಿ ?"

" ಆಕೆ ಎಂದೋ ಸತ್ತು ಹೋದಳು. ದರೋಡೆಗಾರರು ಇಲ್ಲಿ ಹೊಕ್ಕು ಹಾವಳಿ ನಡಿಸಿದುದನ್ನು ಅರಿಯೆಯಾ ? ಅವರೇ ಆಕೆಯನ್ನು ಹಿಚುಕಿ ಕೊಂದರು. ನಾನೊಬ್ಬಳು ಅವಿತುಕೊಂಡುದರಿಂದ ಬದುಕಿದೆ."

" ನೌಕರ-ಚಾಕರರೆಲ್ಲ ಎಲ್ಲಿ ಹೋದರು ?"

" ಅವರೆಲ್ಲ ಮೊದಲೇ ಓಡಿ ಹೋಗಿದ್ದರು. ಅವರಲ್ಲೆಷ್ಟೋ ಮಂದಿ ದರೋಡೆಗಾರರನ್ನು ಕೂಡಿಕೊಂಡಿದ್ದರು. ನಮ್ಮಲ್ಲಿಯ ಬಾಗಿಲ ಕಾಯುವವನೇ ಮುಂದಾಗಿ ದಾರಿ ತೋರುತ್ತಲಿದ್ದ. "

" ಈ ಮನೆಯ ಜನವೆಲ್ಲ ಎಲ್ಲಿ ಹೋದರು ?"

" ಅಲ್ಲಿ ಇಲ್ಲಿ ಹೋಗಿ ಬಿಟ್ಟರು, ಇಬ್ಬರು ಹೆಣ್ಣುಮಕ್ಕಳ ಲಗ್ನವಾದುದಂತೂ ಒಳಿತೇ ಆಯಿತು."

" ಅಂದಬಳಿಕ ನಿನ್ನಂತಹ ಯಕಶ್ಚಿತ ದಾಸಿಯೊಡನೆ ಹೇಗೆ ವ್ಯವಹಾರ ಮಾಡಲಿ ?"

" ನನ್ನ ಮಾತನ್ನು ಇನ್ನಾರೂ ಮೀರುವಂತಿಲ್ಲ."

" ನನಗೆ ಭೂಮಿಕೊಳ್ಳಬೇಕಿತ್ತು. ಮಾರಾಟ ಮಾಡುವಂತಿದ್ದಾರೆಯೇ ?"

" ಹೌದು. ಹಿರಿಯರ ಸಮಾಧಿಯ ಸ್ಥಳವೊಂದನ್ನು ಬಿಟ್ಟು ಉಳಿದುದೆಲ್ಲ ಮಾರಾಟಕ್ಕೆ ಇಟ್ಟಂತೆಯೇ ಇದೆ. "

" ಹಣ ಯಾರೊಡನೆ ಕೊಡುವುದು ? "

" ಮುದುಕನ ಹತ್ತರ ?"

" ಬೆಳ್ಳಿ ಬಂಗಾರದ ನಾಣ್ಯ ಆದೀತೋ ಮುತ್ತು ರತ್ನ ಬೇಕೋ ?"

ಮುತ್ತು ರತ್ನ ಎಂದೊಡನೆ ಆಕೆಯ ಬಾಯಲ್ಲಿ ನೀರೂರಿತು—" ರತ್ನಗಳ ಮೂಲಕವೇ "

೧೭

ವೆಂಗಲುಂಗನ ಜಮೀನು ವಿಸ್ತಾರವಾಯಿತು. ಮನೆಯವರಿಂದ ಕೆಲಸ ನೀಗುವಂತಿರಲಿಲ್ಲ. ಹೊಸ ಕೋಣೆ ಕಟ್ಟಿಸಿದ. ಒಂದೆರಡು ಕತ್ತೆಯನ್ನು ಕೊಂಡ. ಒಂದು ದಿನ ನೆರೆಯ ಚಿಂಗನನ್ನು ಕರೆದು " ನಿನ್ನ ಭೂಮಿಯನ್ನೆಲ್ಲ ನನಗೆ ಮಾರಿಬಿಡು. ನನ್ನ ಜೊತೆಗೇ ಕೆಲಸ ಮಾಡಿಕೊಂಡು ಸುಖವಾಗಿರು " ಎಂದು ಹೇಳಿದ.

ಚಿಂಗನಿಗೂ ಅಷ್ಟೇ ಸಾಕಾಯಿತು. ಮಳೆ ಚನ್ನಾಗಿ ಬಿದ್ದು ಬೆಳೆ ಚನ್ನಾಗಿ ಬಂದಿದ್ದಿತು. ಅವರಿಬ್ಬರೂ ಮೈಮುರಿದು ದುಡಿಯುತ್ತಿದ್ದರು. ಆತನ ಇಬ್ಬರೂ ಮಕ್ಕಳು ನೆರವಾಗುತ್ತಿದ್ದರು. ಓಲಾನಳು ಮನೆಯ ಕೆಲಸ ಮಾಡುತ್ತಿದ್ದಳು. ವಸ್ತ್ರ ಹೊಲೆಯುತ್ತಿದ್ದಳು. ಮೊಚ್ಚೆ ತಯಾರಿಸುತ್ತಿದ್ದಳು. ಈಗ ಆಕೆಗೆ ಅವಳಿ ಜವಳಿ ಮಕ್ಕಳಾಗಿದ್ದರು.

ವೆಂಗಲುಂಗನ ಪೂರ್ವಜರಿದ್ದ ಸ್ಥಳದಲ್ಲಿ ಪ್ರತಿ ೫-೬ ವರ್ಷಕ್ಕೊಮ್ಮೆ ಬರಗಾಲ ಬಿದ್ದೇ ಬೀಳುತ್ತಿತ್ತು. ಆದರೆ ಈ ಸಲ ಏಳು ವರ್ಷವಾದರೂ ಬರಗಾಲ ಬೀಳಲಿಲ್ಲ. ತನಗೂ, ತನ್ನ ಆಳುಗಳಿಗೂ ಸಾಕಷ್ಟು ಧಾನ್ಯವನ್ನು ಸಂಗ್ರಹಿಸಿದ್ದ. ಈಗ ಒಬ್ಬೊಬ್ಬರಂತೆ ಆರು ನೌಕರರನ್ನು ಇಟ್ಟುಕೊಂಡ. ಅವರಲ್ಲೆಲ್ಲ ಚಿಂಗನೇ ವಿಶ್ವಾಸಪಾತ್ರನೆಂದು ಲುಂಗ ಕಂಡುಕೊಂಡಿದ್ದ.

ಈ ವರ್ಷದಿಂದಂತೂ ಆತನಿಗೆ ಹೊಲದ ಕಷ್ಟ ಮಾಡಲು ಪುರಸೊತ್ತೇ ದೊರೆಯುತ್ತಿರಲಿಲ್ಲ ಧಾನ್ಯವನ್ನು ಮಾರಾಟ ಮಾಡುವುದರಲ್ಲಿಯೇ ಸಾಕು ಬೇಕಾಗುತ್ತಿತ್ತು. ಅಲ್ಲದೆ ಆತನಿಗೆ ಬರಹ ಬರದಿದ್ದುದು ದೊಡ್ಡ ಅಡ್ಡಿಯಾಗುತ್ತಿತ್ತು. ಆತ ಕೆಲವು ಸಲ ಹಾನಿಗೊಳಗಾಗಬೇಕಾಗುತ್ತಿತ್ತು. ಇಲ್ಲವೆ ಅಪಹಾಸ್ಯಕ್ಕೀಡಾಗಬೇಕಾಗುತ್ತಿತ್ತು. ತಾನು ಕಲಿಯದಿದ್ದರೂ ತನ್ನ ಮಕ್ಕಳಿಗಾದರೂ ಕಲಿಸಬೇಕೆಂಬ ಇಚ್ಛೆ ಆತನಲ್ಲಿ ಮೊಳೆತಿತು.

ಹಿರೇ ಮಗನಿಗೊಂದೇ ಒಕ್ಕಲತನದ ಕೆಲಸ ತಪ್ಪಿಸಿ ಸಾಲೆಗೆ ಹಾಕೋಣವೆಂದು ಬಗೆದಿದ್ದ. ಅಷ್ಟರಲ್ಲಿ ಕಿರಿಯವನೂ ಬಂದು "ಅಪ್ಪಾ, ನಾನೂ ಗದ್ದೆಗೆ ಹೋಗುವದಿಲ್ಲ. ಅಣ್ಣನೊಬ್ಬನೇ ಕಲಿಯಬೇಕು, ನಾನು ಮಾತ್ರ ಹೋಗಬೇಕೇ? ನಾನೂ ನಿನ್ನ ಮಗನಲ್ಲವೇ?" ಎಂದ.

"ಹಾಗಾದರೆ ಹಾಗೇ ಆಗಲಿ. ನೀವಿಬ್ಬರೂ ಓದಲಿಕ್ಕೇ ಹೋಗಿರಿ."

ಹುಡುಗರಿಬ್ಬರೂ ಹತ್ತಿರದ ಪಟ್ಟಣದಲ್ಲಿ ಇಡಲ್ಪಟ್ಟರು. ಅಲ್ಲಿ ಒಬ್ಬ ಮುಲ್ಕೀ ಸಾಪಾಸಾದ ಮುದುಕನಿದ್ದ. ಹಬ್ಬ ಹುಣ್ಣಿವೆಗಳ ಕಾಣಿಕೆಯೇ ಆತನಿಗೆ ವೇತನವಾಗಿತ್ತು. ಆತ ತುಸುಮಟ್ಟಿಗೆ ಗಣಿತ, ಭಾಷಾಜ್ಞಾನವನ್ನು ಕಲಿಸುತ್ತಿದ್ದ. ವೆಂಗಲುಂಗನ ಮಕ್ಕಳಿಬ್ಬರೂ ಆತನಲ್ಲಿ ಕಲಿಯಹತ್ತಿದರು.

೧೮

ಏಳು ವರ್ಷಗಳ ನಂತರ ಉತ್ತರದ ನದಿಯೊಂದರಲ್ಲಿ ನೆಗಸು ಬಂದುದರಿಂದ ಭೂಮಿಯೆಲ್ಲ ನೀರಲ್ಲಿ ಮುಳುಗಿತು ವೆಂಗಲುಂಗನ ಅರ್ಧಕ್ಕಿಂತಲೂ ಹೆಚ್ಚು ಪಾಲು ನೆಲ ನೀರಿನಲ್ಲಿತ್ತು. ಅದರಿಂದ ಆತನಿಗೆ ಬಹಳಷ್ಟು ಬಿಡುವಾಯಿತು. ಮನೆಯಲ್ಲಿ ಮಾತಾಡುತ್ತ ಕೂಡ್ರೋಣವೆಂದರೆ ಯಾರೂ ಇದ್ದಿಲ್ಲ.

ಓಲಾನಳಲ್ಲಿ ಮೊದಲಿನ ಸೌಂದರ್ಯವಿರಲಿಲ್ಲ. ತಲೆಗೂದಲು ಹಿಕ್ಕದೆ ಎಷ್ಟೋ ದಿನವಾಗಿತ್ತು ಕೂದಲೆಲ್ಲ ಹೊಟ್ಟಾಗಿ ನಿಂತಿತ್ತು. ಆಕೆಯನ್ನು ಕಂಡು ಲುಂಗನೊಮ್ಮೆ "ನಿನಗೆ ಯಾರಾದರೂ ಲುಂಗೆ ಜಮೀನುದಾರನ ಹೆಂಡತಿಯೆಂದು ಹೇಳಬಹುದೇನೇ?" ಎಂದು ಕೇಳಿದ.

"ಆವಳಿ ಜವಳಿ ಮಕ್ಕಳು ಹುಟ್ಟಿದಮೇಲೆ ನನ್ನ ಮೈಯಲ್ಲಿ ನೆಟ್ಟಗಿಲ್ಲ ನನ್ನ ಗರ್ಭಕೋಶದಲ್ಲಿ ಒಂದು ಬಗೆಯ ವೇದನೆಯಾಗುತ್ತಿದೆ."

" ನನ್ನ ಅಭಿಪ್ರಾಯ ಹಾಗಲ್ಲ; ತಲೆಗಿಷ್ಟು ಎಣ್ಣೆಯನ್ನೂ ಕಾಣಿಸಬಾರದೇ ? ಹೊಸ ಸೀರೆ ಕುಪ್ಪುಸವನ್ನಾದರೂ ತೊಟ್ಟುಕೊಳ್ಳಬಾರದೇ ? ಮೆಟ್ಟಿದ ಮೊಚ್ಚೆಯಾದರೂ ಜಮೀನುದಾರನ ಹೆಂಡತಿಗೆ ಯೋಗ್ಯವಾಗಿರಬಾರದೆ ? " ಎಂದು ಕೇಳಿದ ಓಲಾನಳು ಏನೂ ಉತ್ತರ ಕೊಡಲಿಲ್ಲ ತುಸು ಚಹವನ್ನಾದರೂ ಕುಡಿದು ಬರೋಣವೆಂದು ವೆಂಗ ಹೊರಟು ಹೋದ.

ಈ ಭೂಮಿಯೆಲ್ಲ ಓಲಾನಳ ರತ್ನದಿಂದ ಕೊಂಡದ್ದೆಂದು ದಾರಿಯಲ್ಲಿ ನೆನಪಾಯಿತು. " ಆಕೆಗಾದರೂ ಎಷ್ಟು ಸೊಕ್ಕು ? ತನ್ನಲ್ಲಿ ರತ್ನವಿದೆಯೆಂದಾದರೂ ನನ್ನೊಡನೆ ಹೇಳಬೇಕಾದುದು ಆಕೆಯ ಕರ್ತವ್ಯವಿರಲಿಲ್ಲವೇ? ನಾನು ಅದನ್ನು ಕಂಡು ತೆಗೆದುಕೊಳ್ಳದಿದ್ದರೆ ಈ ಭೂಮಿ ಈ ಸುಖ ಎಲ್ಲಿಂದ ದೊರೆಯುತ್ತಿತ್ತು. ಎಷ್ಟೆಂದರೂ ಹೆಂಗಸರ ಬುದ್ಧಿ ಮೊಣಕಾಲ ಕೆಳಗೆ "

ಹೀಗೆಯೇ ಓಲಾನಳ ಬಗ್ಗೆ ಯೋಚಿಸುತ್ತ ಊರು ಸೇರಿದ ಅಲ್ಲೊಂದು ಹೊಸದಾಗಿ ತೆರೆದ ಚಹಾದ ಅಂಗಡಿಯಿತ್ತು. ಅಲ್ಲಿ ಎಲ್ಲ ಜನ ಜುಗಾರಿ ಆಟ ನಡೆಯಿಸುತ್ತಿದ್ದರು. ಜನವೆಲ್ಲ ವ್ಯರ್ಥವಾಗಿ ಹಣ ಹಾಳು ಮಾಡುವ ಸ್ಥಳವಿದೆಂದು ತಿಳಿದು ಹಿಂದೆ ಬಂದಾಗ ಯಾವಾಗಲೂ ಜಿಗುಪ್ಸೆಯಿಂದಲೇ ನೋಡುತ್ತಿದ್ದ. ಆದರೆ ಮನಸ್ಸಿನ ಬೇಸರ ಹಾಗೂ ನಿರುದ್ಯೋಗದ ಮೂಲಕ ತಾನೂ ಅದೇ ಅಂಗಡಿಯ ಒಳಹೊಕ್ಕನು.

ಮೊದ ಮೊದಲು ಆತನಿಗೆ ಏನನ್ನು ತರಿಸುವದೆಂದೂ ತಿಳಿಯಲಿಲ್ಲ. ಅಂತೂ ಸಾವಕಾಶವಾಗಿ ಅತ್ತಿತ್ತ ನೋಡುತ್ತ ಚಹವನ್ನು ಮೆಲ್ಲಗೆ ಗುಟುಕರಿಸಹತ್ತಿದ ಅಂಗಡಿಯಲ್ಲಿ ಇಳಿಬಿಟ್ಟಿದ್ದ ಒಂದು ರೇಶಿಮೆಯ ವಸ್ತ್ರದ ಮೇಲೆ ಅನೇಕ ಸುಂದರ ಸ್ತ್ರೀಯರ ಚಿತ್ರಗಳನ್ನು ಬರೆದಿದ್ದರು. ಇವರೆಲ್ಲ ಅಪ್ಸರೆಯರಿರಬೇಕೆಂದು ಊಹಿಸಿದ. ಜಗತ್ತಿನಲ್ಲಿ ಇಂತಹ ಸ್ತ್ರೀಯರು ಇರಲಾರರೆಂದು ತನ್ಮಯನಾಗಿ ನೋಡುತ್ತ ಕುಳಿತುಬಿಟ್ಟ. ಆಮೇಲೆ ಸುಮ್ಮನೆ ಹಣತೆತ್ತು ಹೊರಬಂದ. ಆದರೆ ದಿನಾಲು ಅಲ್ಲಿಗೆ ಹೋಗಬೇಕೆಂಬ ಉತ್ಸುಕತೆ ಮಾತು ಬೆಳೆಯಹತ್ತಿದ್ದರಿಂದ—ಅಲ್ಲಿಗೆ ಹೋಗಿ ಚಹಾ ಕುಡಿಯುತ್ತಿದ್ದ. ಸ್ತ್ರೀಯರ ಪಟವನ್ನೇ ದಿಟ್ಟಿಸುತ್ತ ಕೂಡ್ರುತ್ತಿದ್ದ.

ಆ ಊರಲ್ಲಿ ಇನ್ನಾವ ಅಂಗಡಿಗೂ ಮೇಲ್ಮಾಳಿಗೆ ಇರಲಿಲ್ಲ. ರಾತ್ರಿಯಾಯಿತೆಂದರೆ ಮೇಲಿನ ಮಾಳಿಗೆಯ ಮೇಲೆಲ್ಲ ಸ್ತ್ರೀಯರ ಸಂಗೀತ, ನಗೆ ಚಾಟಿಕೆಗಳು ಮಾರ್ಗದ ಮೇಲೆ ಹೋಗುವವರಿಗೆಲ್ಲ ಕೇಳಿಸುತ್ತಿತ್ತು.

ಒಮ್ಮೆ ಅಲ್ಲಿ ಚಹಾ ಕುಡಿಯುತ್ತ ವೆಂಗಲುಂಗ ಕುಳಿತಾಗ ಯಾರೋ ಬಂದು, ಆತನ ಹೆಗಲ ಮೇಲೆ ಕೈಯಿಟ್ಟರು. ಆತನಿಗೆ ಆಶ್ಚರ್ಯವಾಯಿತು. ಯಾಕೆಂದರೆ ತನ್ನ ಗುರುತಿನವರಾರೂ ಇಲ್ಲಿ ಇಲ್ಲವೆಂಬೇ ಆತನ ಕಲ್ಪನೆಯಾಗಿತ್ತು. ಕೈಯಿಟ್ಟವಳು ಬೇರಾರೂ ಆಗಿರದೆ—ಹ್ವಾಂಗ ಮಂದಿರದಲ್ಲಿದ್ದ ಕುಕ್ಕು ಎಂಬ ಸುಂದರ ಸ್ತ್ರೀಯಾಗಿದ್ದಳು. ಆಕೆ ಗಹಗಹಿಸಿ ನಕ್ಕು "ವೆಂಗಲುಂಗ, ನೀನು ಇಲ್ಲಿ ಬಂದಿರುವೆಯೆಂದು ನಾನು ಕಲ್ಪಿಸಿರಲಿಲ್ಲ." ಎಂದಳು.

ಸಾಧಾರಣ ತರಗತಿಯ ಒಕ್ಕಲಿಗನಲ್ಲವೆಂದು ತೋರಿಸಬೇಕೆಂಬ ಆಗ್ರಹ. ಅದಕ್ಕಾಗಿ "ಬೇರೆಯವರಂತೆ ಖರ್ಚು ಮಾಡಲು ನನ್ನಲ್ಲಿ ಹಣವಿಲ್ಲವೆಂದು ಭಾವಿಸಿದ್ದೆಯಾ ? ನನ್ನಲ್ಲಿ ಈಗ ಬೇಕಾದಷ್ಟು ಹಣವಿದೆ" ಎಂದ.

"ಇದನ್ನು ಎಲ್ಲರೂ ಬಲ್ಲರು ಉಂಡು ತಿಂದು ಹೆಚ್ಚಾದ ಹಣವನ್ನು ಖರ್ಚು ಮಾಡಲು ಇದರಂತಹ ಯೋಗ್ಯ ಸ್ಥಳ ಇನ್ನಾವುದೂ ಇಲ್ಲ ಇಲ್ಲಿಯ ಸರಾಯಿಯಂತಹ ಸರಾಯಿ ಇನ್ನೆಲ್ಲಿಯೂ ದೊರೆಯದು.

"ಉಹುಂ. ನಾನಿನ್ನೂ ಸರಾಯಿ ಕುಡಿದಿಲ್ಲ."

"ನಾನು ಬಲ್ಲೆ ಅಂತಹದೇನನ್ನೂ ನೀನು ಕಂಡಿರಲಿಕ್ಕಿಲ್ಲ. ಸುಂದರ ಕನ್ನೆ—ಸುಗಂಧಿತ ಕಮಲ ಕೋಮಲಕರ—ಕಲ್ಪಿಸಿರಲಿಕ್ಕೂ ಇಲ್ಲ"—ಆ ಮೇಲೆ ಅಲ್ಲಿಯ ವಿಶೇಷ ಮಾಹಿತಿಯನ್ನೆಲ್ಲ ಪೂರೈಸಿದಳು. ಈ ಚಿತ್ರದಲ್ಲಿ ಕಾಣುವ ಸ್ತ್ರೀಯರಲ್ಲಿ ನೀನು ಮೆಚ್ಚಿದವಳನ್ನು ನಿನ್ನ ಮುಂದೆ ತಂದು ನಿಲ್ಲಿಸುವೆನೆಂದೂ ಆಶ್ವಾಸನವಿತ್ತಳು.

ಹೊಸ ಉತ್ಸಾಹ, ಚೈತನ್ಯ ಸೂಕ್ಷ್ಮತೆಯಿಂದ ಎಲ್ಲ ಚಿತ್ರಗಳನ್ನೂ ನೋಡಿದ. ಅವುಗಳಲ್ಲಿ ಮೂವರನ್ನು ಆರಿಸಿದ. ಕೊನೆಗೆ ಅದರಲ್ಲಿ ಒಬ್ಬಳನ್ನು ಮೆಚ್ಚಿದ. ಆತನ ಬಾಯಿಂದ ಒಮ್ಮೆಲೇ "ಬಳ್ಳಿಯಲ್ಲೊಂದು ಸುಂದರ ಹೂ ಬಿಟ್ಟಂತಿದೆ" ಎಂಬ ಉದ್ಗಾರ ಹೊರಟಿತು.

ಈ ಉದ್ಗಾರವನ್ನು ಕೇಳಿ ತಾನೇ ಲಜ್ಜಿತನಾಗಿ ನಾಲಿಗೆ ಕಚ್ಚಿಕೊಂಡ. ಹಣಕೊಟ್ಟು ಮನೆಯ ದಾರಿ ಹಿಡಿದ.

೧೯

ನಿಂತ ನೀರು ಹೋಗಿಬಿಟ್ಟು, ಗದ್ದೆಯಲ್ಲಿ ಕೆಲಸ ಮಾಡುವುದು ಶಕ್ಯವಾಗುವಂತಿದ್ದರೆ ಆತ ಚಹಾದಂಗಡಿಯತ್ತ ಸುಳಿಯುತ್ತಿರಲಿಲ್ಲ. ಆದರೆ ನೀರು ಹಾಗೇ ನಿಂತಿತ್ತು. ಮಕ್ಕಳು ಬೆಳಿಗ್ಗೆ ಶಾಲೆಗೆ ಹೋದವರು ಸಾಯಂಕಾಲ

ಮರಳುತ್ತಿದ್ದರು. ಆತನ ಮನಸ್ಸಿನಲ್ಲಿ ಅಶಾಂತಿ ಬೇರು ಬಿಟ್ಟಿದುದರಿಂದ ಓಲಾನಳ ಕಣ್ಣು ತಪ್ಪಿಸಿಯೇ ಇರುತ್ತಿದ್ದ. ಹಬ್ಬ ಹುಣ್ಣಿವೆಗಳಲ್ಲಿ ಧರಿಸ ಲೆಂದು ಓಲಾನಳು ಹೊಲದು ಕೊಟ್ಟಿದ್ದ ವಸ್ತ್ರ ಧರಿಸಿ ಯಾರೊಡನೆಯೂ ಹೇಳದೆ ಒಂದು ದಿನ ಸಾಯಂಕಾಲ ಹೊರಬಿದ್ದ.

ಆತ ಅಂಗಡಿ ಮುಟ್ಟಿದಾಗ ಅಂಗಡಿಯಲ್ಲಿ ತುಂಬ ದೀಪ ಹಚ್ಚಿದ್ದರು. ಶ್ರೀಮಂತರೆಲ್ಲ ಒಂದಾದ ಮೇಲೊಂದು ಗ್ಲಾಸು ಸರಾಯಿ ಬರಿದು ಮಾಡುತ್ತಿದ್ದರು. ಆತನಿಗೆ ಒಮ್ಮೆಲೇ ಒಳಹೋಗಲು ಸಂಕೋಚವಾದುದರಿಂದ ತುಸು ತಡೆದ. ಮನಸ್ಸು ಹೇಸಿ ಹಿಂತಿರುಗುವವನಿದ್ದ. ಅಷ್ಟರಲ್ಲಿ ಕುಕ್ಕು ಕೆಳಗೆ ಬಂದುಬಿಟ್ಟಳು. ಮೇಲಿನ ಸ್ತ್ರೀಯರಿಗೆ ಗಿರಾಕಿಗಳನ್ನು ತಂದುಕೊಡುವುದೇ ಆಕೆಯ ಉದ್ಯೋಗವಾಗಿತ್ತು. ವೆಂಗಲುಂಗನನ್ನು ನೋಡಿದೊಡನೆಯೇ ಅದೇ ಒಕ್ಕಲಿಗನೆಂದು ಕಾಣುತ್ತಿದೆ. "ಓಹೋ ಬಂದುಬಿಟ್ಟೆಯಾ ?" ಎಂದಳು.

"ಬಾರದೇನು? ಇತರಂತೆ ಖರ್ಚು ಮಾಡಲು ನನಗೇನೂ ಕೊರತೆ ಯಾಗಿಲ್ಲ."

"ಬೇರೆಯವರಂತೆ ಹಣ ಇದ್ದರೆ, ನೀನೂ ಹೆರವರಂತೆ ಸುಖಪಡ ಬಹುದು."

ಕಿಸೆಯಲ್ಲಿ ಕೈ ಹಾಕಿ ಹಿಡಿ ಹೊನ್ನು ತೆಗೆದು ತೋರಿಸಿದ. "ಸಾಕೋ, ಇನ್ನೂ ಬೇಕೋ" ಎಂದ.

"ಹಾಗಾದರೆ ಬಾ, ನಿನಗೆ ಯಾವುದು ಬೇಕೋ ಅದನ್ನು ಆರಿ ಸಿಕೋ ?"

"ನನಗೆ ಯಾರನ್ನು ಆರಿಸಬೇಕೋ ತಿಳಿಯದಾಗಿದೆ. ಹಾ! ಆದರೂ ಆ ಬಾರೀಕಾಯಿ, ನೇರವಾಗಿದ್ದಾಳಲ್ಲ !"

ಆಕೆ ಸಮ್ಮತಿ ಸೂಚಿಸಿ ತನ್ನನ್ನು ಹಿಂಬಾಲಿಸಲು ಹೇಳಿದಳು ಆತನಿಗೆ ಎಲ್ಲರೂ ತನ್ನನ್ನೇ ನೋಡುತ್ತಿದ್ದಾರೇನೋ ಎಂಬ ಕಲ್ಪನೆಯಿಂದ ಸುತ್ತಲೂ ಹೊರಳಿ ನೋಡಿದ, ಎಲ್ಲರೂ ತಂತಮ್ಮ ವಿಚಾರದಲ್ಲಿಯೇ ಮಗ್ನರಾಗಿದ್ದು ದನ್ನು ಕಂಡು ಸಂತೋಷವೆನಿಸಿತು.

ಹಾಗೆಯೇ ಮುಂದುವರಿದು ಮಾಳಿಗೆಗೆ ಹೋದ. ಅಲ್ಲಿ ಅನೇಕ ಕೋಣೆ ದಾಟಿದ ಮೇಲೆ ದೊಡ್ಡ ಹಾಲ ಇತ್ತು. ಅಲ್ಲಿಗೆ ಹೋದೊಡನೆಯೇ ಆ ಹೆಂಗಸು "ರಾತ್ರಿಯ ಮೊದಲನೇ ಗಿರಾಕಿ ಬಂದ" ಎಂದು ಕೂಗಿದಳು.

ಎಲ್ಲ ಬಾಗಿಲನ್ನೂ ತೆರೆದು ನೂರಾರು ಸ್ತ್ರೀಯರು ಹೊರಬಿದ್ದರು. 'ನೀವ್ಯಾರೂ ಅಲ್ಲ, ಕಮಲಿನಿಗಾಗಿ ಬಂದವ ನೀತ' ಎಂದು ಆಕೆಯಿದ್ದ ಕೋಣೆಗಾಗಿ ವೆಂಗನನ್ನು ಕರೆದೊಯ್ದಳು. ಅಲ್ಲಿ ಆಕೆ ಹಾಸಿಗೆಯ ಮೇಲೆ ಕುಳಿತಿದ್ದಳು. ಇಂತಹ ಒಕ್ಕಲಿಗನ ಸಂಗಡ ಬೆರೆಯಲು ಆಕೆ ಮೊದಮೊದಲು ಒಲ್ಲೆನೆಂದರೂ ಕೊನೆಗೆ ಹಣಕ್ಕಾಗಿ ಒಪ್ಪಿದಳು.

ವೆಂಗಲುಂಗ ಇಂತಹ ಸುಂದರ ಬಾಲಿಕೆಯನ್ನು ಎಂದೂ ನೋಡಿರಲಿಲ್ಲ. ಚಿತ್ರವನ್ನೂ ತನ್ಮಯತೆಯಿಂದ ನೋಡುತ್ತಿರುವಂತೆ, ಕಣ್ಣೆವೆ ಮುಚ್ಚದೆ ನೋಡುತ್ತ ಕುಳಿತ. ಬಾಲಿಕೆಯೇ ಮೊದಲು ಆತನ ಹೆಗಲ ಮೇಲೆ ಕೈಯಿಟ್ಟು ನಯವಾಗಿ ಅತ್ತಿಂದಿತ್ತ ಕೈಯಾಡಿಸಹತ್ತಿದಳು. ವೆಂಗಲುಂಗನಿಗೆ ಇಂತಹ ಕೋಮಲ ಕರಾಂಗುಲಿಗಳ ಸ್ಪರ್ಶ ಹಿಂದೆಂದೂ ಆಗಿರಲಿಲ್ಲ. ಆತನ ಮೈಯ್ಯಲ್ಲೆಲ್ಲ ವಿದ್ಯುತ್ತು ಸಂಚಾರವಾದಂತೆನಿಸಿತು.

ವೆಂಗಲುಂಗನು ಸುಮ್ಮನೆ ಕುಳಿತು ನೋಡುತ್ತಿರುವುದನ್ನು ಕಂಡು ಆಕೆಗೆ ನಗು ಬಂದಿತು. "ನೀನೆಂತಹ ಭೋಳೇ ಸ್ವಭಾವದವನಪ್ಪ! ರಾತ್ರಿಯೆಲ್ಲ ಹೀಗೆ ಕೂತುಕೊಂಡಿರಬೇಕೆಂದು ತಿಳಿದಿರುವೆಯಾ" ಎಂದಳು.

ಪ್ರಥಮರಾತ್ರಿ ಕಳೆಯಿತು. ವೆಂಗಲುಂಗನಿಗೆ ಚಟ ಹತ್ತಿತು. ದಿನಾಲು ಚಹಾದ ಅಂಗಡಿಗೆ ಹೋಗುತ್ತಿದ್ದ. ರಾತ್ರಿಯಲ್ಲಿ ಆ ಹುಡುಗಿಯ ಸಂಪರ್ಕಕ್ಕೆಳೆಸುತ್ತಿದ್ದ. ಆದರೂ ಆಕೆಯ ಪ್ರೀತಿಯಲ್ಲಿ ಕೃತ್ರಿಮತೆಯನ್ನು ಕಾಣುತ್ತಿದ್ದ. ಹೀಗಾಗಿ ಜ್ವಲನ ಶಾಂತವಾಗಲಿಲ್ಲ. ಆ ಆಸೆ ತೀರಲಿಲ್ಲ. ಓಲಾನಳೊಡನೆ ಮೊದಲ ಸಲ ಬೆರೆತಾಗಲೇ ಆತನಿಗೆ ತೃಪ್ತಿಯೆನಿಸಿತ್ತು. ಆದರೆ ಈ ಹುಡುಗಿಯಿಂದ ಅಂತಹ ತೃಪ್ತಿ ಸಿಗಲಿಲ್ಲ ಕೆಲವೇ ಹೊತ್ತಿನಲ್ಲಿ ಆಕೆ ಆತನನ್ನು ಕೋಣೆಯಿಂದ ಹೊರಹಾಕಿ, ದುಡ್ಡನ್ನು ಮಾತ್ರ ಎತ್ತಿಹಾಕುತ್ತಿದ್ದಳು. ಆಕೆ ದುಡ್ಡಿಗಾಗಿ ದೇಹವನ್ನು ಮಾರಿದ್ದಳೇ ಹೊರತು ಓಲಾನಳಂತೆ ಆತ್ಮಾರ್ಪಣೆ ಮಾಡಿರಲಿಲ್ಲ. ಅದಕ್ಕಾಗಿ ಸಿಕ್ಕೀತೆಂದು ಹಾರೈಸಿ ಬಂದ ಶಾಂತಿ ದೂರ ಸರಿಯುತ್ತಲಿದ್ದಿತು.

ಬೇಸಿಗೆ ಕಾಲವನ್ನೆಲ್ಲ ಆಕೆಯ ಮೋಹಪಾಶದಲ್ಲಿ ಕಳೆದರೂ ಆಕೆ ಯಾರೆಂದಾಗಲೀ, ಎಲ್ಲಿಂದ ಬಂದವಳೆಂಬುದಾಗಲೀ ಯಾವುದೂ ಗೊತ್ತಿರಲಿಲ್ಲ. ಆಕೆ ಮಾತಾಡುತ್ತಿರುವುದು ಜಿ-ಓ ಅದೇ ಶಬ್ದ. ಯಾವಾಗಲೂ ನಗು

ತ್ತಿರುತ್ತಿದ್ದಳು. ವೆಂಗಲುಂಗನು ಮಾತಾಡುತ್ತಿದ್ದುದೂ ಅಷ್ಟೇ. ಆತನಿಗೆ ಬೇಕಾದುದು ಆಕೆಯ ಸೌಂದರ್ಯ.

ಬೆಳಗಾದೊಡನೆಯೇ ಎಷ್ಟೊತ್ತಿಗೆ ರಾತ್ರಿಯಾದೀತೆಂಬ ತವಕ. ರಾತ್ರಿ ಆತನಿಗೆ ನಿದ್ದೆ ಬರುತ್ತಿರಲಿಲ್ಲ. ಸೆಕೆಯ ನೆವಮಾಡಿ ಹೊರಗೆ ತನ್ನ ಹಾಸಿಗೆ ಹಾಕಿಕೊಳ್ಳುತ್ತಿದ್ದ. ಆತನ ಹೃದಯದಲ್ಲಿ ಆತನೇ ಅರಿಯದ ಅಶಾಂತಿ ಉತ್ಪನ್ನವಾಗಿತ್ತು. ಯಾರಾದರೂ ಹೊಲಮನೆಯ ಸಾಗುಮಾಡುವ ವಿಷಯವೆತ್ತಿದರೆ "ಯಾಕೆ ತೊಂದರೆ ಕೊಡುತ್ತೀರಪ್ಪ" ಎಂದು ಗದರುತ್ತಿದ್ದ.

ಆತನ ಪ್ರೇಯಸಿಯೂ ಆತನಿಗೆ ಆತ್ಮಾರ್ಪಣೆ ಮಾಡಿರಲಿಲ್ಲ. ಆಕೆಯ ಪ್ರೇಮ ನೈಜವಾದುದಲ್ಲ. ಬಾಡಿಗೆಯ ತಟ್ಟು. ಅದರಿಂದಾಗಿ ಆತನ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ಯಾರ ಮಾತಿಗೆ ಉತ್ತರ ಕೊಡುತ್ತಿರಲಿಲ್ಲ. ಮೋರೆ ಗಂಭೀರ ವಿಚಾರದಲ್ಲಿ ತಲ್ಲೀನರಾದವರಂತಿತ್ತು.

ಪ್ರೇಯಸಿಯ ಸಲಹೆಯಂತೆ ಒಮ್ಮೆ ಚಂಡಿಕೆಯನ್ನು ಕತ್ತರಿಸಿಕೊಂಡ. ಆದರೆ ಓಲಾನಳಿಗೆ ಇದೊಂದು ಅಪಶಕುನವೆಂದೆನಿಸಿತು. ಆದರೆ ಊರ ನವಯುವಕರೆಲ್ಲ ಹೀಗೆಯೇ ಮಾಡುತ್ತಾರೆಂದು ಹಾರಿಕೆಯ ಉತ್ತರ ಕೊಟ್ಟ. ಆದರೂ ಅಜ್ಞಾತ ಭಯವೊಂದು ಬಾಧಿಸುತ್ತಲೇ ಇತ್ತು.

ಹಿಂದೆಂದೂ ಆತ ತನ್ನ ದೇಹದ ಬಗ್ಗೆ ವಿಶೇಷ ಲಕ್ಷ್ಯ ಪೂರೈಸುತ್ತಲಿದ್ದಿಲ್ಲ. ಈಗ ದಿನಾಲು ಸ್ನಾನ ಮಾಡಹತ್ತಿದ. ಸುವಾಸನೆಯ ಸಾಬೂನನ್ನು ಹಚ್ಚಿಕೊಳ್ಳುತ್ತಿದ್ದ. ಹೊಸ ವಸ್ತ್ರ ತರಿಸಿದ. ಮೊದಲು ಓಲಾನಳೇ ಹೊಲಿದ ವಸ್ತ್ರ ಧರಿಸುತ್ತಿದ್ದ. ಈಗ ಅದು ಸರಿಯೆನಿಸುತ್ತಿರಲಿಲ್ಲವಾದುದರಿಂದ ಪೇಟೆಗೆ ಹೋಗಿ ನಿಪುಣ ಸಿಂಪಿಗನಲ್ಲಿ ಹೊಲೆಯಲು ಕೊಟ್ಟ. ಚಹಾದ ಅಂಗಡಿಯಲ್ಲಿ ಒಂದು ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡು ಆ ವಸ್ತ್ರವನ್ನೆಲ್ಲ ಇಟ್ಟ. ಅಲ್ಲಿಂದಲೇ ವಸ್ತ್ರ ಬದಲಿಸಿ ಕಮಲಿನಿಯಿದ್ದಲ್ಲಿಗೆ ಹೋಗುತ್ತಿದ್ದ.

ಓಲಾನಳು ಇವನ್ನೆಲ್ಲ ಕಂಡಿದ್ದರೂ ಏನು ಮಾಡಬೇಕೆಂದು ಆಕೆಗೆ ತೋಚುತ್ತಿರಲಿಲ್ಲ. ಆಕೆ ದಾಸಿಯಿರುವಾಗ ಹ್ವಾಂಗ ಮಂದಿರದಲ್ಲಿಯ ತರುಣರೆಲ್ಲ ಇದೇ ರೀತಿ ಆಚರಿಸುತ್ತಿದ್ದರೆಂದು ಗೊತ್ತಿದ್ದಿತು. ಅದಕ್ಕಾಗಿ ಒಳಗಿಂದೊಳಗೇ ಕರಕರಿಪಟ್ಟುಕೊಂಡಳು.

ವೆಂಗಲುಂಗನ ಹಣ ನೀರಿನಂತೆ ಖರ್ಚಾಗುತ್ತಿತ್ತು. ಕಮಲಿನಿಗೆ ಬರೇ ಹಣವಷ್ಟೇ ಕೊಟ್ಟರೆ ಸಾಲುತ್ತಿದ್ದಿಲ್ಲ. ಆಕೆ ಬೇಡಿದ ಹಲವಾರು ವಸ್ತ್ರ ಒಡವೆ

ಗಳನ್ನೂ ತರಿಸಿಕೊಡಬೇಕಾಗುತ್ತಿತ್ತು. ಇಲ್ಲವಾದರೆ ಇಲ್ಲದ ಮೊಂಡತನ ಮಾಡುತ್ತಿದ್ದಳು. 'ನೋಡು ಆಕೆಯ ಪ್ರಿಯಕರ ಆಕೆಗೆ ಚಿನ್ನದ ಬಳೆಕೊಟ್ಟ. ರತ್ನದ ಹಾರಕೊಟ್ಟ. ನನಗೆ ಮಾತ್ರ ಏನೂ ಇಲ್ಲ.' ಎಂದು ಚಂಡಿಯೆಬ್ಬಿಸುತ್ತಿದ್ದಳು. ಅವಳ ಸಮಾಧಾನಕ್ಕಾಗಿ ಬೇಡಿದ್ದನ್ನೆಲ್ಲಾ ತೆಗೆಸಿ ಕೊಟ್ಟ. ಹಣ ಮಾತ್ರ ವೆಚ್ಚವಾಗುತ್ತಿತ್ತು. ಬೇಡಿಕೆ ದಿನ ದಿನ ಬೆಳೆಯುತ್ತಿತು.

ಕೊನೆಗೊಮ್ಮೆ ಶಿಲ್ಕು ಹಣ ತೀರಿತು. ಎರಡು ಮುತ್ತನ್ನು ಓಲಾನಳು ಹಿಂದೆ ತನಗಾಗಿ ತೆಗೆದುಕೊಂಡಿದ್ದಳು. ವೆಂಗಲುಂಗ ಅದನ್ನು ಕೇಳಲು ಬಂದ. ತನ್ನ ಮಗಳಿಗೆ ಕಿವಿಯುಂಗುರ ಮಾಡಿಸಿ ಆಕೆಯ ಮದುವೆಯ ಸಮಯಕ್ಕೆ ಕೊಡಬೇಕೆಂದು ಓಲಾನಳ ಬಯಕೆಯಿತ್ತು. ಒಲ್ಲೆಂದರೂ ಕೇಳದೆ ಒತ್ತಾಯದಿಂದ ತೆಗೆದುಕೊಂಡು ಹೋದ. ಆಕೆಯ ಕಣ್ಣು ಒದ್ದೆಯಾದರೂ ಲಕ್ಷಿಸಲಿಲ್ಲ.

೨೦

ಇದೇ ರೀತಿ ಇನ್ನೆಷ್ಟು ದಿನ ನಡೆಯುತ್ತಿತ್ತೊ, ಯಾರು ಬಲ್ಲ? ಅಷ್ಟರಲ್ಲಿ ಅವರ ಚಿಗಪ್ಪ ಅಲ್ಲಿಗೆ ಬಂದ. ಆತ ವಯಸ್ಸಿಗಿಂತಲೂ ಮುದುಕನಾಗಿ ತೋರುತ್ತಿದ್ದ. ಅದೇ ಹೊಲಸು ವಸ್ತ್ರ. ವೆಂಗಲುಂಗ ಒಮ್ಮೆಲೇ ಆತನನ್ನು ಗುರುತಿಸಲಿಲ್ಲ. ಅವನ ತಂದೆಯೂ ದಿಟ್ಟಿಸಹತ್ತಿದ. ಆತನಿಗೂ ಗುರುತು ಹತ್ತಲಿಲ್ಲ. ಚಿಗಪ್ಪನೇ ಮಾತಿಗೆ ಮೊದಲಿಟ್ಟ.

"ಊಟವಾಗಿದೆಯೋ ಇಲ್ಲವೊ?" ಎಂದು ವೆಂಗಲುಂಗ ಕೇಳಿದ.

"ಇಲ್ಲ. ನಿನ್ನ ಜೊತೆಗೇ ಕೂತು ಊಟ ಮಾಡಬೇಕೆಂದು ಬಯಸಿರುವೆ. ಅಲ್ಲದೆ ನನಗೀಗ ಮೂರು ದಿನಗಳಿಂದ ನಿದ್ದೆಯೂ ಇಲ್ಲ. ನೀನೀಗ ಉಂಡು ತಿಂದು ಸುಖವಾಗಿದ್ದೀಯೆಂದು ಕೇಳಿ ಇಲ್ಲಿ ಬಂದೆ. ನೀನು ಇಷ್ಟು ದೊಡ್ಡ ಶ್ರೀಮಂತನಾಗಿರುವೆಯೆಂದು ಕನಸಿನಲ್ಲಿಯೂ ಎಣಿಸಿರಲಿಲ್ಲ."

ವೆಂಗಲುಂಗ ಯೋಚಿಸುತ್ತಲೇ ಒಳಹೊಕ್ಕ. ಈ ಮನೆಯಿಂದೆಂದೂ ಚಿಗಪ್ಪ ಹೊರಡಲಿಕ್ಕಿಲ್ಲವೆಂದು ಆತನಿಗೆ ಖಚಿತವಾಗಿ ಗೊತ್ತು. ಅದು ಕೆಲ ಹೊತ್ತಿನಲ್ಲಿಯೇ ಸತ್ಯವಾಗಿ ಪರಿಣಮಿಸಿತು. ಚಿಗಪ್ಪ ನಿದ್ದೆಯಿಂದೆಚ್ಚತ್ತೊಡನೆಯೇ "ಮಗನೇ, ಈ ಮನೆಯಲ್ಲಿ ನಾವು ಮೂರು ಮಂದಿ ಹೇಗಾದರೂ ಹಿಡಿಸಬಹುದು. ನಾನು ಹೋಗಿ ಹೆಂಡತಿ ಮಕ್ಕಳನ್ನು ಕರೆದುಕೊಂಡು ಬರುತ್ತೇನೆ." ಎಂದು ಹೊರಟು ಹೋದ.

ವೆಂಗಲುಂಗನಿಗೇನೋ ಸಿಟ್ಟು ಬಂದಿತು. ಆದರೆ ಇಂತಹ ಶ್ರೀಮಂತ ನಾಗಿ ಮನೆ ಬಾಗಿಲಿಗೆ ಬಂದ ಚಿಗಪ್ಪನಿಗೆ ಹೊರಹಾಕಿದನೆಂಬ ಜನಾಪ ವಾದ ಭಯದಿಂದ ಸುಮ್ಮನಾದ ಹಾಗೂ ಒಂದು ಸಣ್ಣ ಮನೆಯನ್ನು ತೆರವು ಮಾಡಿಸಿಕೊಟ್ಟ. ಸಾಯಂಕಾಲದೊಳಗಾಗಿ ಚಿಗಪ್ಪ ತನ್ನ ಕುಟುಂಬದೊಡನೆ ಬಂದು ನೆಲಸಿದ.

ಕೆಲ ದಿನಗಳಲ್ಲಿಯೇ ಆತನ ಸಿಟ್ಟು ಶಾಂತವಾಯಿತು ಮನೆಯಲ್ಲಿ ಚಿಗ ಪ್ಪನ ಊಟ ಉಪಚಾರಗಳನ್ನು ನಿರ್ವಹಿಸಲು ಓಲಾನಳೂ ಅಡ್ಡಿ ಮಾಡು ತ್ತಿರಲಿಲ್ಲ. ಈಗ ಮತ್ತೆ ಆತನಿಗೆ 'ಕಮಲಿನಿ' ಯ ಚಿಂತೆಹತ್ತಿತು. "ಮನೆ ಯಲ್ಲಿ ಅಡವಿಯ ನಾಯಿ ತುಂಬಿರುವಾಗ ಮನಸ್ಸಮಾಧಾನಕ್ಕಾಗಿ ಹೊರ ಹೋಗದೇ ಗತಿಯೆಲ್ಲಿ?" ಎಂದು ಯೋಚಿಸಿಕೊಂಡ.

ಮತ್ತೆ ಹೃದಯದಲ್ಲಿ ಅದೇ ಬೆಂಕಿ ಅದೇ ಅತೃಪ್ತ ಕಾಮವಾಸನೆ. ಓಲಾನಳಾಗಲೀ, ಚಿಂಗನಾಗಲೀ ಆತನೆಲ್ಲಿ ಹೋಗುತ್ತಾನೆಂದು ಅರಿತಿರ ಲಿಲ್ಲ. ಆದರೆ ಚಿಗವ್ವಿಗೆ ಮಾತ್ರ ತಿಳಿಯದೇ ಹೋಗಲಿಲ್ಲ ಆ ಮಾತನ್ನು ಆಕೆ ಓಲಾನಳ ಕಿವಿಗೂ ಹಾಕಿದಳು. ತನ್ನ ಚಿಗವ್ವಿ ತನ್ನ ಒಲವನ್ನು ಅರಿತಿದ್ದಾ ಳೆಂದು ವೆಂಗನಿಗೂ ಗೊತ್ತಾಯಿತು. ಅದಕ್ಕಾಗಿ ತನ್ನ ಸುಖದುಃಖ ಅವಳೊ ಡನೆ ತೋಡಿಕೊಂಡರೆ ತಪ್ಪಿಲ್ಲವೆಂದೂ ಯೋಚಿಸಿದ.

ಚಿಗವ್ವಿ ಮಧ್ಯಸ್ಥಿಕೆಯ ಕೆಲಸಕ್ಕೆ ಒಪ್ಪಿದಳು. ಆಕೆಯ ಹೆಸರನ್ನೂ, ವಾಸಸ್ಥಳವನ್ನೂ, ಅದಕ್ಕೆ ಸಂಬಂಧಿಸಿದ ಇತರ ಎಲ್ಲ ಮಾಹಿತಿಯನ್ನೂ— ತಿಳಿಸಿ ಈ ಕೆಲಸದ ಸಲುವಾಗಿ ಎಷ್ಟು ಹಣಬಿದ್ದರೂ ಅಡ್ಡಿಯಿಲ್ಲ ಎಂದು ಹೇಳಿದನು.

ಓಲಾನಳ ಜೊತೆಗೆ ಮಲಗುವದು ಆತನಿಗೆ ಸೇರುತ್ತಿರಲಿಲ್ಲ "ಒಂದೇ ಒರೆಯಲ್ಲಿ ಎರಡು ಕತ್ತಿಗಳನ್ನಿಡುವುದೂ ತರವಲ್ಲ, ಅವಳಿಗಾಗಿ ಬೇರೊಂದು ಹೊಸ ರೀತಿಯ ಮನೆ ಕಟ್ಟಿಸಬೇಕು. ಅಲ್ಲದೆ ಪ್ರೇಯಸಿಯೊಡನೆ ಕಾಲ ಕಳೆಯಲು ಸ್ವತಂತ್ರವಾದ ಮನೆ ಬೇಕು." ಎಂದು ಯೋಚಿಸಿ ಮೂರು ಕೋಣೆಗಳುಳ್ಳ ಸ್ವತಂತ್ರ ಮನೆ ಕಟ್ಟಿಸಿ ಅದನ್ನೆಲ್ಲ ಮೇಜು, ಖುರ್ಚಿ, ಕನ್ನಡಿ ಗಳಿಂದ ಅಲಂಕರಿಸಿದ. ಮುಂದೊಂದು ಕೆರೆತೋಡಿಸಿದ. ಓಲಾನಳೊಡನೆ ಈ ಸಂಗತಿಗಳನ್ನು ತಿಳಿಸಲು ನಾಚಿಕೆಯಾಗುತ್ತಿದ್ದುದರಿಂದ ಎಲ್ಲವನ್ನೂ ತಾನೇ ಮಾಡಿಕೊಂಡ.

ಆದರೆ ಕಮಲಿನಿಯು ಇಲ್ಲಿಗೆ ಬರುವ ಬಗ್ಗೆ ಯಾವ ನಿಶ್ಚಯವೂ ಆಗಿರಲಿಲ್ಲ. ಆ ರೀತಿಯ ವಾರ್ತೆಗಳೂ ಕಿವಿಗೆ ಬೀಳುತ್ತಿರಲಿಲ್ಲ. ಅದಕ್ಕಾಗಿ ಮನಸ್ಸಿಗೆ ನೆಮ್ಮದಿ ಇರಲಿಲ್ಲ. ಮಕ್ಕಳ ಮೇಲೆ ಹರಿಹಾಯುತ್ತಿದ್ದ. ಒಮ್ಮೊಮ್ಮೆ ಓಲಾನಳಿಗೂ ಸಿಟ್ಟು ಮಾಡುತ್ತಿದ್ದ. ಆದರೆ ಆಕೆ ಆತನಿಗಾಗಿ ಪಟ್ಟ ಕಷ್ಟ—ಇವನ್ನೆಲ್ಲ ಮರೆಯುವುದು ಶಕ್ಯವಿರಲಿಲ್ಲ. ಆದಕ್ಕಾಗಿ ಆಕೆಯ ಮುಂದೆ ನಿಲ್ಲಲಿಕ್ಕೂ ಆತನಿಗೆ ನಾಚಿಕೆಯೆನಿಸುತ್ತಿತ್ತು.

ಕೊನೆಗೊಮ್ಮೆ ಕರಾರು ಹೊಂದಿತು. ಆದರೆ ಮುತ್ತು ರತ್ನ ಮಾತ್ರ ಕೈಬಿಟ್ಟಿತು ಚಹಾದ ಅಂಗಡಿಯವನಿಗೆ ಕೆಲವು ರೂಪಾಯಿ. ಕಮಲಿನಿಗೆ ಅನೇಕ ಆಭರಣ, ಆಭೂಷಣ ತೆರಬೇಕಾಯಿತು. ಕುಕ್ಕುವೂ ತನ್ನ ಪಾಲು ಬಿಡಲಿಲ್ಲ. ಚಿಗವ್ವಿಗೂ ಒಂದು ಹತ್ತು ನಾಣ್ಯ ಕೊಟ್ಟ.

ಕಮಲಿನಿಯು ತನಗಾಗಿ ಸಿದ್ಧಪಡಿಸಿದ ಮನೆಗೆ ಬಂದಳು. ಜೊತೆಗೆ ಕುಕ್ಕುವೂ ಬಂದಿದ್ದಳು. ಚಿಗವ್ವಿಯೇ ಅವರನ್ನು ಸ್ವಾಗತಿಸಿ "ಇದೋ ನಿಮ್ಮ ಮನೆ, ಈತನೇ ನಿಮ್ಮೊಡೆಯ" ಎಂದು ತಿಳಿಸಿದಳು.

ಆ ಸಮಯದಲ್ಲಿ ಮನೆಯಲ್ಲಿ ಇನ್ನಾರೂ ಇರಲಿಲ್ಲ. ಕಮಲಿನಿ ಬರುವಳೆಂದು ಗೊತ್ತಿದ್ದುದರಿಂದ ಚಿಂಗ ಹಾಗೂ ಮಕ್ಕಳನ್ನು ದೂರದ ಗದ್ದೆಗೆ ಕಳಿಸಿದ್ದ. ಕಮಲಿನಿಯು ಕೋಣೆಯು ಪ್ರವೇಶಿಸಿದೊಡನೆಯೇ ಚಿಗವ್ವಿಯು ಪರದೆಯನ್ನು ಇಳಿಬಿಟ್ಟಳು.

ಓಲಾನಳ ಅತ್ತ ಸುಳಿಯಲೇ ಇಲ್ಲ. ಬೆಳಿಗ್ಗೆ ಕೆಲಸಕ್ಕೆ ಹೋದವಳು ರಾತ್ರಿ ಮನೆಗೆ ಬಂದು ಎಂದಿನಂತೆ ಅಡಿಗೆ ಮಾಡಿ ಉಂಡು ಮಲಗಿದಳು ಕಮಲಿನಿಯು ಹಗಲೆಲ್ಲ ಹೊರಗೆ ಬರುತ್ತಿರಲಿಲ್ಲ ವೆಂಗಲುಂಗ ಅವಳ ಜೊತೆಯಲ್ಲಿಯೇ ಇರುತ್ತಿದ್ದ. ಕುಕ್ಕೂ ಅವರಿಬ್ಬರ ಉಪಚಾರ ನಡಿಸುತ್ತಿದ್ದಳು. ವೆಂಗಲುಂಗ ಸಂತೋಷದಿಂದಿದ್ದ.

## ೨೧

ಕುಕ್ಕುವಿಗೂ ಓಲಾನಳಿಗೂ ಜಗಳವಾದೀತೆಂದು ವೆಂಗಲುಂಗ ತಿಳಿದಿರಲಿಲ್ಲ. ಕಮಲಿನಿಯೊಡನೆ ಜಗಳವಾದರೂ ಆಗಬಹುದೆಂದು ಊಹಿಸಿದ್ದ. ಯಾಕೆಂದರೆ ಓಲಾನಳು ಕಮಲಿನಿಯನ್ನು ತಿರಸ್ಕರಿಸುತ್ತಿದ್ದಳು. ಆದರೆ ಒಮ್ಮೆ ಕುಕ್ಕುವಿನೊಡನೆ ಓಲಾನಳ ಜಗಳವಾಗಿಯೇ ಬಿಟ್ಟಿತು.

ಚಿಗವ್ವಿಗೆ ಮಧ್ಯಸ್ಥಿಕೆ ನಡಿಸಲು ಹೇಳುವಾಗ ಕುಕ್ಕ್ಯವೂ ಇಲ್ಲಿಗೆ ಬಂದಾಳೆಂದು ವೆಂಗನಿಗೆ ಕಲ್ಪನೆಯಿರಲಿಲ್ಲ. ಆದರೆ ಕಮಲಿನಿಯು ತನ್ನ ಗುಲಾತಿನ ವರಾಹೂ ಇಲ್ಲವೆಂದು ಹೇಳಿಕೊಂಡದ್ದರಿಂದ ಕುಕ್ಕ್ಯವನ್ನೂ ಇಟ್ಟುಕೊಳ್ಳಲು ಸಮ್ಮತಿಸಿದ.

ಆದರೆ ಕುಕ್ಕ್ಯವನ್ನು ಕಂಡೊಡನೆ ಓಲಾನಳಿಗೆ ತಡೆಯಲಾಗಲಿಲ್ಲ. ಕುಕ್ಕವೇನೋ ಓಲಾನಳೊಡನೆ ಗೆಳೆತನ ಬೆಳೆಸಬೇಕೆಂದು ಬಯಸಿದ್ದಳು. ಮೊದಲು ಅವರಿಬ್ಬರೂ ಹ್ವಾಂಗ ಮಂದಿರದಲ್ಲಿದ್ದರು. ಅಲ್ಲಿ ಕುಕ್ಕವಿನದೇ ಪ್ರಾಧಾನ್ಯವಿತ್ತು. ಓಲಾನಳು ಮಾತ್ರ ಅಡಿಗೆಯ ಆಳಾಗಿದ್ದಳು. ಬಂದ ದಿನವೇ ಕುಕ್ಕವು “ ಓಲಾನ, ಎಂತಹ ಬದಲಾವಣೆಯಾಯಿತು ನೋಡು, ನೀನಿಲ್ಲಿ ಒಡತಿ. ನಾನು ನಿನ್ನ ಗಂಡ ಹೇಳಿದ ಹಾಗೆ ಕೇಳಬೇಕಾದ ಹೆಂಗಸು” ಎಂದು ಗೆಳೆತನ ಬೆಳೆಸಲು ಪ್ರಸ್ತಾವನೆ ಹಾಕಿದ್ದಳು.

ಆದರೆ ಓಲಾನಳು ಉತ್ತರ ಕೊಡದೆ ಒಳಗೆ ಗಂಡನಿದ್ದಲ್ಲಿ ಹೋಗಿ “ ಈ ದಾಸಿ ಇಲ್ಲಿ ಏಕೆ ಬಂದಿದೆ ?” ಎಂದು ಕೇಳಿದಳು.

ವೆಂಗನಿಗೆ ‘ತನ್ನ ಮನೆಯಲ್ಲಿ ಬೇಕಾದವರು ಬಂದು ಹೋಗಬಹುದು. ನೀನ್ಯಾರು ಕೇಳಲಿಕ್ಕೆ ?’ ಎಂದು ಕೇಳೋಣವೆಂದು ಯೋಚಿಸಿದ. ಆದರೆ ಉತ್ತರವೇ ಹೊರಡಲಿಲ್ಲ. ಓಲಾನಳೇ ಮಗದೊಮ್ಮೆ ಕೇಳಿದಳು.

“ ಇದರಿಂದ ನಿನಗೇನೂ ಹಾನಿ ತಟ್ಟುವಂತಿಲ್ಲ” ಎಂದು ಉತ್ತರವಿತ್ತ

“ ನನಗೆ ಮೊದಲಿನಿಂದಲೂ ಆಕೆ ಸೇರುವದಿಲ್ಲ. ಹಿಂದೆ ಆ ಮನೆಯಲ್ಲಿದ್ದಾಗ ನನಗೆ ಆ ಕೆಲಸ ಮಾಡು, ಈ ಕೆಲಸ ಮಾಡು ಎಂದು ಮೇಲಿಂದ ಮೇಲೆ ಆಜ್ಞಾಪಿಸುತ್ತಿದ್ದಳು. ಈಗ ಈ ಮನೆಯಲ್ಲಿಯೂ ಅಧಿಕಾರ ನಡಿಸ ಬಂದಿದ್ದಾಳೆ. ಬೆಳಗ್ಗಿನಿಂದ ತನ್ನ ಒಡತಿಗೆ ನೀರು ಬೇಕು. ಕಾಸಿಕೊಡು ಎಂದು ನನಗೆ ಹೇಳುತ್ತಿದ್ದಾಳೆ. ಇವಳ್ಯಾರು ನನಗೆ ಹೇಳಲಿಕ್ಕೆ ?”

“ಕುಸು ನೀರು ಕಾಯಿಸಿಕೊಟ್ಟರೆ ನಿನ್ನದೇನು ಗಂಟು ಹೋಗುತ್ತಿತ್ತು?”

“ ಈ ಮನೆಯ ದಾಸಿಯರ ದಾಸಿ ನಾನಲ್ಲ. ”

“ ದಾಸಿಗಾಗಿ ಮಾಡಿಕೊಡುವುದು ಬೇಕಿರಲಿಲ್ಲ. ದಾಸಿಯ ಒಡತಿಗೆ.”

“ ಹೀಗೋ ? ಈ ಒಡತಿಗೇ ನೀವು ನನ್ನ ಮುತ್ತುಗಳನ್ನು ಕೊಟ್ಟರಬೇಕು. ”

ಮುಂದೆ ವೆಂಗನಿಂದ ಮಾತಾಡಲಾಗಲಿಲ್ಲ. ಕುಕ್ಕವಿಗಾಗಿ ಬೇರೊಂದು ಒಲೆಯನ್ನು ಮಾಡಿಸಿಕೊಟ್ಟ. ಆದರೆ ಇದರಿಂದ ವೆಂಗಲುಂಗನಿಗೆ ಖರ್ಚ

ಗೊಂಚು ಹಾದಿಯಾಯಿತು. ದಿನಾಲು ಆಕೆ ಪೇಟೆಯಿಂದ ತರತರದ ಮಾಂಸ, ಖಾದ್ಯಗಳನ್ನು ತಂದು ಬೇಯಿಸಹತ್ತಿದಳು. ಚಿಗವ್ವಿಯೂ ಅವರ ಜೊತೆಗೆ ಸೇರಹತ್ತಿದಳು. ಮೂವರೂ ದಿನಾಲು ತರತರದ ಭಕ್ಷ್ಯಗಳನ್ನು ತಯಾರಿಸಿ ತಿಂದು ತೇಗಿದರು. ವೆಂಗಲುಂಗನೊಮ್ಮೆ ಕಮಲಿನಿಗೆ ಹೇಳಿಯೂ ನೋಡಿದ. ಆಕೆ ಕಣ್ಣೀರು ತಂದು ನನ್ನಲ್ಲಿ ನಿಮಗೆ ಪ್ರೇಮವಿಲ್ಲವೇ ಎಂದಳು. ವೆಂಗ ಲುಂಗ ಸುಮ್ಮನಿರಬೇಕಾಯಿತು.

ಮುಂದೊಂದು ದಿನ ಮತ್ತೊಂದು ಘಟನೆ ನಡೆಯಿತು. ಅದು ವೆಂಗ ಲುಂಗನ ತಂದೆಗೆ ಸಂಬಂಧಿಸಿದುದು. ಹೊಸ ಮನೆ ಕಟ್ಟಿಸಿದ ಮೇಲೆ ಆತ ನೋಡಿರಲಿಲ್ಲ. ಅಲ್ಲಿ ಇರುವವಳು ಯಾರೆಂದು ಆತನಿಗೆ ಗೊತ್ತಿರಲಿಲ್ಲ. ಒಮ್ಮೆ ಅಲ್ಲಿಗೆ ಹೋಗಿ ಇಳಿಬಿಟ್ಟಿದ್ದ ಪರದೆಯನ್ನೆತ್ತಿ ನೋಡಿದ. ವೆಂಗಲುಂಗ ಕಮಲಿನಿಯೊಡನೆ ಮಾತನಾಡುತ್ತ ನಿಂತಿದ್ದ. ಅದನ್ನು ಕಂಡು ತಂದೆಯಿಂದ ಸಹಿಸಲಾಗಲಿಲ್ಲ. " ಇದೆಲ್ಲಿಯ ದಾಸಿ ?" ಎಂದು ಗದರಿದ. " ದಾಸಿಯಲ್ಲ ವಪ್ಪಾ ನನ್ನ ಎರಡನೇ ಹೆಂಡತಿ " ಎಂದರೂ ಕೇಳಲಿಲ್ಲ. ಹೋದಾಗಲೆಲ್ಲ ಸದಾ ಬಡಿದು ' ಏ ದಾಸಿ ' ಎಂದು ಒದರುವುದೇ ಆತನ ಕೆಲಸ. ವೆಂಗಲುಂಗ ತಂದೆಗೆ ಏನೊಂದೂ ಪ್ರತ್ಯುತ್ತರವನ್ನು ಕೊಡುತ್ತಿರಲಿಲ್ಲ. ಆದರೆ ಮನಸ್ಸಿನ ಶಾಂತಿ ಕದಡಿ ಹೋಗಿತ್ತು.

ಕೆಲ ದಿನಗಳಲ್ಲಿ ಇನ್ನೊಂದು ಘಟನೆ ನಡೆಯಿತು. ವೆಂಗಲುಂಗನ ಅವಳಿ ಜವಳಿ ಮಕ್ಕಳು ಮನೆಯಲ್ಲೇ ಇರುತ್ತಿದ್ದರು. ಅವರೂ ಒಮ್ಮೊಮ್ಮೆ ಈ ಹೊಸ ಮನೆಯತ್ತ ಬಂದು ಹೋಗುತ್ತಿದ್ದರು. ಆದರೆ ಕಮಲಿನಿಗೆ ಮಕ್ಕಳು ಅತ್ತ ಸುಳಿಯುತ್ತಿರುವುದು ಸರಿಯೆನಿಸುತ್ತಿರಲಿಲ್ಲ. ವೆಂಗಲುಂಗ ನೊಡನೆ ದೂರಿದಳು. ಆತನೂ ಸಹ " ತಂದೆಯಂತೆ ಮಕ್ಕಳೂ ಸೌಂದ ರ್ಯಾಪೇಕ್ಷಿಗಳಾಗಿರಬೇಕು' ಎಂದು ನಗೆ ಮಾತಿನಲ್ಲಿಯೇ ತೇಲಿಸಿ ಬಿಟ್ಟಿದ್ದ. ಒಮ್ಮೆ ಆ ಮಕ್ಕಳಿಬ್ಬರೂ ಒಳಹೊಕ್ಕು ಕಮಲಿನಿಯ ಕಿವಿಯ ಕುಡುಕನ್ನು ಜಗ್ಗಿಬಿಟ್ಟರು. ಆಕೆ ಭಯದಿಂದ ಚೀರಿ ಬಿಟ್ಟಳು. ಈ ಮಕ್ಕಳು ಇಲ್ಲಿ ಬರುವ ದಾದರೆ ತಾನು ಇಲ್ಲಿರುವದಿಲ್ಲವೆಂದು ಗಂಡನಿಗೆ ಹೇಳಿದಳು. ವೆಂಗಲುಂಗ ನಿಗೆ ಮಕ್ಕಳಮೇಲೆ ವಾತ್ಸಲ್ಯವಿದ್ದುದರಿಂದ ಆಕೆಯ ಮಾತನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಒಂದೆರಡು ದಿನ ಅತ್ತ ಸುಳಿಯಲೇ ಇಲ್ಲ.

ಈ ರೀತಿ ಹೊಸ ಜೀವನದಲ್ಲಿ ನೆಳಲು ಬೆಳಕು ಕಣ್ಣುಮುಚ್ಚಾಲೆ ಯಾಡುತ್ತಿತ್ತು. ಬೇಸಿಗೆ ಕಳೆದೊಡನೆಯೇ ಹೊಲದ ನೆನಪಾಯಿತು. ಕಮ ಲಿನಿಗಿಂತಲೂ ಹೊಲವೇ ಹೆಚ್ಚು ಅವಶ್ಯಕವೆಂದೆನಿಸಿತು. ಮತ್ತೊಮ್ಮೆ ಕಾಯಕಷ್ಟದ ಒಕ್ಕಲಿಗನಾದ

೨೨

ವೆಂಗಲುಂಗ ಹೊಲದಲ್ಲಿ ದುಡಿಯಹತ್ತಿದ. ಆಯಾಸವಾದೊಡನೆ ಭೂಮಿತಾಯಿಯ ತೊಡೆಯ ಮೇಲೆ ಸುಮ್ಮನೆ ಬೀಳುತ್ತಿದ್ದ. ಆತನ ಮನಸ್ಸು ಹಗುರೆನಿಸುತ್ತಿತ್ತು. ಸಾಯಂಕಾಲ ಮನೆಗೆ ಬಂದೊಡನೆ ಕಮಲಿ ನಿಯಿದ್ದಲ್ಲಿ ಬರುತ್ತಿದ್ದ. ಮೈಮೇಲಿನ ಧೂಳು ಹಾಗೇ ಇರುತ್ತಿತ್ತು. ಆಕೆ ಯೊಡನೆ ' ನೀನು ಕೇವಲ ಒಕ್ಕಲಿಗನೊಬ್ಬನ ಬೆನ್ನುಹತ್ತಿದೆಯಲ್ಲ ! ಎಂದು ಚೇಷ್ಟೆ ಮಾಡುತ್ತಿದ್ದ. ಆದರೆ ಆಕೆ ಒಪ್ಪುತ್ತಿರಲಿಲ್ಲ.

ದಿನಾಲು ಸ್ನಾನ ಮಾಡುವುದರಲ್ಲಿಯೇ ಈಗ ವೇಳೆ ಕಳೆಯುತ್ತಿಲ್ಲ. ದುಡಿದಷ್ಟು ಕಡಿಮೆಯೆಂದೆನಿಸುತ್ತಿತ್ತು. ಒಂದಾದೊಡನೆ ಇನ್ನೊಂದು ಕೆಲಸ ಹಿಡಿಯುತ್ತಿದ್ದ. ಓಲಾನಳು ಅಡಿಗೆ, ಮನೆ ಕೆಲಸಗಳಲ್ಲಿ ಮಗ್ನಳಾಗಿ ರುತ್ತಿದ್ದಳು. ಕಮಲಿನಿಯು ಆಮೋದ ಪ್ರಮೋದಗಳಲ್ಲಿಯೇ ತನ್ಮಯಳಾ ಗಿರುತ್ತಿದ್ದಳು. ಊರಲ್ಲಿಯ ಜನರೆಲ್ಲ ವೆಂಗಲುಂಗನ ಭಾಗ್ಯ ಕೊಂಡಾಡು ತ್ತಿದ್ದರು. ಕಮಲಿನಿಯಂತಹಳನ್ನು ಪಡೆದನಲ್ಲ ಎಂದು ಅವರೆಲ್ಲರಿಗೂ ಈರ್ಷೆ ಯಾಗಿತ್ತು. ಜನಸಾಮಾನ್ಯರಿಗೆ ಆತನ ಬಗ್ಗೆ ಶ್ರದ್ಧೆಯುಂಟಾಗಿತ್ತು.

ವೆಂಗಲುಂಗನ ಗುಣಗಾನಮಾಡುವವರಲ್ಲಿ ಆತನ ಚಿಗಪ್ಪನೂ ಒಬ್ಬ. " ಕಮಲಿನಿಯಂತಹ ಸುಂದರ ಸ್ತ್ರೀ ಇನ್ನಾರೂ ಇಲ್ಲ. ಅಂತಹಳನ್ನು ನೋಡುವುದಕ್ಕೂ ಪೂರ್ವದ ಪುಣ್ಯ ಬೇಕು. ಆಕೆ ರೇಶಿಮೆಯ ವಸ್ತ್ರವನ್ನೇ ಧರಿಸುತ್ತಾಳೆ. ನನ್ನ ಅಣ್ಣನ ಮಗ -- ನಮ್ಮ ಕುಲದ ಕೀರ್ತಿಯನ್ನು ಮುಂದೆ ತಂದ. ಅವರ ಮಕ್ಕಳು ಮರಿ ಕೂತಲ್ಲಿ ತಿಂದರೂ ಬೇಡ ಎನ್ನುವಂತಿಲ್ಲ " ಎನ್ನುತ್ತಿದ್ದ.

ವೆಂಗಲುಂಗನಿಗೂ ತನ್ನ ಮಕ್ಕಳು ಸಾಲೆಗೆ ಹೋಗುತ್ತಿದ್ದಾ ರಲ್ಲ ಎಂದು ಹೆಮ್ಮೆ. ಊರ ಜನವೆಲ್ಲ ' ಮಕ್ಕಳ ಅಕ್ಷರ ಮುದ್ದಾಗಿದೆ. ಹುಡುಗರು ಚುರುಕಿದ್ದಾರೆ ' ಎಂದು ಅಭಿಪ್ರಾಯ ಪಡುತ್ತಿದ್ದರು. ವೆಂಗ ಲುಂಗ ಕಾಳು ಮಾರಲು ಹೋಗುವಾಗ ಮಕ್ಕಳನ್ನು ಕರೆದುಕೊಂಡೇ

ಹೋಗುತ್ತಿದ್ದ. ಹುಡುಗರು ಓದಿ ನೋಡಿ ಸರಿಯೆಂದು ಹೇಳದ ಹೊರತು ತನ್ನ ಸಹಿ ಮಾಡುತ್ತಿರಲಿಲ್ಲ.

ಹುಡುಗ ಬೆಳೆದು ದೊಡ್ಡವನಾದ. ಅವನ ಮದುವೆ ಮಾಡಿ ಬಿಡಬೇಕೆಂದು ಯೋಚಿಸಿದ. ಆದರೆ ಅದು ತಿಳಿದುಕೊಂಡಷ್ಟು ಸುಲಭವಿರಲಿಲ್ಲ. ನೆಂಟಸ್ತಿಕೆ ಗಂಟುಹಾಕಲು ಯೋಗ್ಯರಾದವರು ಯಾರೆಂದು ಯೋಚಿಸುತ್ತಿದ್ದ. 'ಚಿಂಗ ಸ್ವಾಮಿಭಕ್ತನೇನೋ ನಿಜ. ಆದರೆ ಸಾಕಷ್ಟು ಚತುರನಲ್ಲ. ಆತನಿಗೆ ಮಗಳಿದ್ದರೆ ಏನೂ ತೊಂದರೆ ಇರಲಿಲ್ಲ.

ದಿನ ಒಂದರ ಮೇಲೊಂದು ಉರುಳುತ್ತಿತ್ತು. ಹಿರೇ ಹುಡುಗ ಉದಾಸೀನನಾಗಿ ಗಂಭೀರನಾಗಿರುತ್ತಿದ್ದ. ಊಟದಲ್ಲಿಯೂ ರುಚಿ ಇರಲಿಲ್ಲ. ಹೆಚ್ಚು ಹೇಳಿದರೆ ಅಳುತ್ತಿದ್ದ. ಒಂದು ದಿನ ಶಾಲೆಗೂ ಹೋಗಲಿಲ್ಲ. ಇದನ್ನು ಕೇಳಿ ವೆಂಗಲುಂಗ ಸಿಟ್ಟಿನಿಂದ ಥಳಿಸಿದ. ಹೆಂಡತಿ ಬಂದು "ಎಲ್ಲಿಂದಾದರೂ ಕನ್ಯೆಯೊಂದನ್ನು ಹುಡುಕಿ ತಂದು ಲಗ್ನಮಾಡಿದರಾಗದೇ" ಎಂದು ಕೇಳಿದಳು.

"ಏನೇ ಆಗಲಿ ಎಲ್ಲಿಂದಾದರೂ ಹುಡುಗಿಯೊಂದನ್ನು ಹುಡುಕಿ ತರುತ್ತೇನೆ" ಎಂದು ಹೊರಟುಹೋದ.

೩

ವೆಂಗಲುಂಗ ಗದ್ದೆಯ ಕೆಲಸದಲ್ಲಿ ತೊಡಗಿದುದು ಕಮಲಿನಿಯ ಮನಸ್ಸಿಗೆ ಬರಲಿಲ್ಲ. ತನ್ನೊಡನೆಯೇ ಆತನಿದ್ದು ತಾನು ಹೇಳಿದುದನ್ನೆಲ್ಲ ಪೂರೈಸಬೇಕೆಂಬ ಆಸೆ ಆಕೆಗೆ. ಒಂದು ದಿನ ವೆಂಗನಿಗೆ "ಒಂದು ವರ್ಷವೂ ನನ್ನೊಡನೆ ಸರಿಯಾಗಿ ಸಂಸಾರ ಮಾಡಲು ಶಕ್ಯವಾಗದಮೇಲೆ ನನ್ನನ್ನಿಲ್ಲಿಗೇಕೆ ಕರತಂದೆ ?" ಎಂದು ಕೇಳಿದಳು.

"ತನ್ನ ಹತ್ತಿರಿದ್ದ ರತ್ನದ ಎಚ್ಚರವನ್ನು ಯಾರೂ ಮಾಡುತ್ತಿರುವುದಿಲ್ಲ. ಅದು ಕಳೆದುಹೋದ ಮೇಲೆ ಮಾತ್ರ ದುಃಖಕ್ಕೀಡಾಗುತ್ತಾರೆ. ನನಗೆ ನನ್ನ ಹಿರಿಯ ಮಗನ ಮದುವೆಯ ಚಿಂತೆಯೇ ದೊಡ್ಡದಾಗಿದೆ. ಆದರೆ ಯೋಗ್ಯ ವಧುವನ್ನು ಆರಿಸಿ ಅವರಿಬ್ಬರ ಲಗ್ನಮಾಡುವಂತಹ ಯೋಗ್ಯ ಮನುಷ್ಯರಾರೂ ದೊರೆತಿಲ್ಲ."

"ನಾನು ಚಹಾದಂಗಡಿಯಲ್ಲಿರುವಾಗ ದಿನಾಲು ಒಬ್ಬ ಮನುಷ್ಯ ನಮ್ಮಲ್ಲಿಗೆ ಬರುತ್ತಿದ್ದ. ಆತನಿಗೊಂದು ಮಗಳಿದ್ದಾಳಂತೆ. ಆತ ಒಳ್ಳೆಯ ಶ್ರೀಮಂತ, ಅಲ್ಲದೆ ತುಂಬಾ ತಿಳವಳಿಕೆಯುಳ್ಳವ. ಆತನ ಬಗ್ಗೆ ವಿಶೇಷ

ಮಾಹಿತಿ ನನಗಿಲ್ಲ. ಆತನ ಹೆಸರು ಲ್ಯೂ, ಕಾಳಿನ ವ್ಯಾಪಾರಿ. ಅವನ ಪರಿಚಯ ಕುಕ್ಕುವಿಗೆ ತುಂಬಾ ಇದೆ. ”

ಕುಕ್ಕುವು ತಾನೇ ಮುಂದಾಗಿ ಈ ಕೆಲಸ ನಿರ್ವಹಿಸುವ ಹೊಣೆ ಹೊತ್ತಳು. ಇನ್ನೊಂದು ನಾಲ್ಕಾರು ದಿನ ಯೋಚಿಸಿ ಹೇಳುತ್ತೇನೆಂದು ವೆಂಗಲುಂಗ ಅವರಿಂದ ಬೀಳ್ಕೊಂಡ.

ಹಿರೇ ಮಗಂದಿರಿಬ್ಬರೂ ಒಂದೇ ಕೋಣೆಯಲ್ಲಿ ಮಲಗುತ್ತಿದ್ದರು. ಹಿರೇ ಮಗ ರಾತ್ರಿ ತನ್ನ ಕೋಣೆಯಲ್ಲಿ ಮಲಗುವದಿಲ್ಲವೆಂದು ವೆಂಗನಿಗೆ ಶಂಕೆ ಬಂದಿತ್ತು. ಅದಕ್ಕಾಗಿ ತಮ್ಮನನ್ನು ಕರಿಸಿ ಅಣ್ಣನು ನಿನ್ನೆ ರಾತ್ರಿ ಎಲ್ಲಿ ಹೋಗಿದ್ದ ?” ಎಂದು ಕೇಳಿದನು.

“ ನನಗೇನೂ ಗೊತ್ತಿಲ್ಲ. ”

“ ಹಾಗಾದರೆ ಎಲ್ಲಿ ಹೋಗುತ್ತಾನೆಂದು ನಿನಗೂ ಹೇಳಿಲ್ಲವೇ ? ಸುಳ್ಳು ಹೇಳುತ್ತೀಯಾ ?”

“ ಆವ ಎಲ್ಲಿ ಹೋಗುತ್ತಾನೆಂದು ಹೇಳಲಾರೆ. ಹೇಳಿದರೆ ನನಗೆ ತುಂಬಾ ಪೆಟ್ಟು ಬಿದ್ದೀತು.”

“ ಬೊಗಳೋ ಬೇಗ, ಇಲ್ಲವಾದರೆ ನಾನೇ ನಿನ್ನ ಸಮಾಚಾರ ತೆಗೆದುಕೊಳ್ಳುವೆ.”

ಕಿರಿಯವನಿಗೆ ಅಂಜಿಕೆಯಾಗಿ ಹೇಳಿಬಿಟ್ಟ. “ ಈಗ ಮೂರು ನಾಲ್ಕು ದಿನವಾಯಿತು. ಅವನು ರಾತ್ರಿ ಎಲ್ಲಿ ಹೋಗುತ್ತಾನೆ. ಏನು ಮಾಡುತ್ತಾನೆಂಬುದು ಗೊತ್ತಿಲ್ಲ. ಅವನು ದಿನಾ ರಾತ್ರಿ ನಿಮ್ಮ ಚಿಗಪ್ಪನ ಮಗನ ಸಂಗಡ ಹೋಗುತ್ತಾನೆ.”

ಚಿಗಪ್ಪನ ಮಗನಿಗೆ ಕರೆಸಿ ಕೇಳಿದುದಾಯಿತು. “ ಅವನೇನು ಸಂಣ ಹುಡುಗನಲ್ಲ; ದಾರಿ ತೋರಿಸುವ ಅವಶ್ಯಕತೆ ಏನಿಲ್ಲ. ”

“ ಹೇಳೋ, ಸೂ—ಮಗನೇ ನಿನ್ನೆ ರಾತ್ರಿ ಎಲ್ಲಿದ್ದೀಯಂತ ?”

“ ಆತ ಹ್ಯಾಂಗ ಮಂದಿರಕ್ಕೆ ಹೋಗಿದ್ದ. ”

ಇನ್ನು ಈ ಮಣ್ಣು ಗೊಡೆ ತೊಳೆಯುತ್ತ ಹೋಗುವದರಲ್ಲೇನು ಅರ್ಥ ವಿಲ್ಲೆಂದೆನಿಸಿತು. ಹೇಗಾದರೂ ಮಾಡಿ ಲ್ಯೂನನ್ನು ಒಪ್ಪಿಸಿ ನೆಂಟಸ್ತಿಕೆ ಗಂಟು ಹಾಕಲು ಕುಕ್ಕುವಿಗೆ ಆಜ್ಞಾಪಿಸಿದ.

ಈಗ ಮಗನಬಗ್ಗೆ ತುಂಬಾ ಲಕ್ಷ್ಯವಿಡಹತ್ತಿದ. ಹೊತ್ತು ಕಂತಿದ ನಂತರ ಹೊರಬೀಳಲು ಅಪ್ಪಣೆಯಿರಲಿಲ್ಲ. ಆದರೇನು ಮಾಡುವುದು ?

ಕುಕ್ಕುವಿನ ಸಂಧಾನ ಯಶಸ್ವಿಯಾದರೂ ಫಲಪ್ರದವಾಗಲಿಲ್ಲ. ಆತ ಹೆಣ್ಣು ಕೊಡಲಿಕ್ಕೇನೋ ಒಪ್ಪಿದ. ಆದರೆ ಹುಡುಗಿಗಿನ್ನೂ ವಯಸ್ಸಾಗದ್ದರಿಂದ ಇನ್ನು ಮೂರು ವರ್ಷ ತಡೆಯಬೇಕೆಂದು ತಿಳಿಸಿದ.

ವೆಂಗನಿಗೆ ನಿರಾಶೆಯಾಯಿತು ಮಗ ಅಮಾಸ್ಯೆಗೋ, ಹುಣ್ಣಿಮೆಗೋ ಒಮ್ಮೆ ಸಾಲೆಗೆ ಹೋಗುತ್ತಿದ್ದ. ಹೇಗೆ ಆದರೂ ಈ ಎಲ್ಲ ಮಕ್ಕಳ ಲಗ್ನ ಮಾಡಿದ ಹೊರತು ಸುಖವಿಲ್ಲವೆಂದು ಓಲಾನಳಿಗೆ ಹೇಳಿದ.

ಆತ ಸರಿಯಾಗಿ ಗದ್ದೆಗೆ ಹೋಗಿ ದುಡಿಯಹತ್ತಿದ. ಭೂದೇವಿಯು ಆತನಿಗೆ ಶಾಂತಿಯನ್ನಿತ್ತಳು.

ಹೀಗೆಯೇ ಕೆಲಕಾಲ ಕಳೆಯಿತು. ಮತ್ತೊಮ್ಮೆ ಬರಗಾಲ ಬಂದಿತು. ಎಲ್ಲರೂ ನೆಟ್ಟ ಬೆಳೆ ಸುಟ್ಟು ಹೋಯಿತು. ವೆಂಗಲುಂಗನ ಭೂಮಿಯಲ್ಲಿ ಮಾತ್ರ ಕೆಲ ಪಾಲು ಬದುಕಿತ್ತು. ಈ ಬರಗಾಲದಲ್ಲಿ ಯಾರಿಗೂ ಲಗ್ನದ ಯೋಚನೆ ಬರಲಿಲ್ಲ. ಒಂದೆರಡು ವರ್ಷ ಕಳೆಯಿತು. "ಇನ್ನೇನು ಒಂದು ವರ್ಷ ಉಳಿಯಿತು. ಆ ಮೇಲೆ ಲಗ್ನ ಮಾಡಿದರಾಯಿತು. ಆ ಚಿಂತೆಯನ್ನು ಇಂದೇ ಹಚ್ಚಿಕೊಂಡು ಕೊರಗಲೇಕೆ?" ಎಂದು ಯೋಚಿಸಿ ವೆಂಗ ನಿಶ್ಚಿಂತನಾದ.

೨೪

ಹಿರಿಯ ಮಗನಿಗೆ ಇನ್ನೂ ಹೆಚ್ಚು ಕಲಿಯಬೇಕು; ಪಟ್ಟಣದಲ್ಲಿ ವಾಸಿಸಬೇಕು ಎಂಬ ವಿಚಾರ ಹೊಳೆಯಿತು. ಅಲ್ಲಿಯ ವೃದ್ಧ ಶಿಕ್ಷಕನು ಕಲಿಸಬಹುದಾದದ್ದನ್ನೆಲ್ಲ ಆತ ಕಲಿಸಿ ಮುಗಿಸಿದ್ದ. ಇದಕ್ಕೂ ಹೆಚ್ಚಿಗೆ ಕಲಿಸುವುದು ಆತನಿಗೆ ಶಕ್ಯವಿರಲಿಲ್ಲ. ಅದಕ್ಕಾಗಿ ದಕ್ಷಿಣ ದಿಕ್ಕಿನ ದೊಡ್ಡ ಪಟ್ಟಣಗಳಲ್ಲಿ ವಾಸಿಸಿ ಹೆಚ್ಚಿನ ಶಿಕ್ಷಣ ಕಲಿತು ಬರಬೇಕೆಂಬ ಆಸೆ ಆತನಿಗೆ. ಆದರೆ ತಂದೆ ಒಮ್ಮೆಲೇ ಒಪ್ಪಲಿಲ್ಲ. ಮಗ ಕಲಿತಷ್ಟೇ ಸಾಕು ಎಂಬ ವಿಚಾರ ಆತನದು. ಅಲ್ಲದೆ ತನ್ನ ಮಗ ಕಲಿತಷ್ಟು ಸುತ್ತು ಮುತ್ತಲಿನ ಹಳ್ಳಿಯಲ್ಲಿ ಇನ್ನಾರೂ ಓದಿಲ್ಲ ಎಂಬ ಹೆಮ್ಮೆ ಬೇರೆ. ಮೊದಮೊದಲಂತೂ ವೆಂಗ ಮಗನಿಗೆ ವಿರೋಧ ಮಾಡಹತ್ತಿದ. "ಗದ್ದೆಗೆ ಹೋಗಿ ಕೆಲಸ ಮಾಡು ಕಲಿತಷ್ಟೇ ಸಾಕು; ನಮ್ಮ ಅಪ್ಪ ಮುತ್ತಜ್ಜ ಕಲಿತದ್ದೂ ಅಷ್ಟೇ! ಒಂದಕ್ಷರ ಕಲಿಯದಿದ್ದ ನಾನೇ ಇಷ್ಟೆಲ್ಲ ಗಳಿಸಿಲ್ಲವೇ?" ಎನ್ನುತ್ತಿದ್ದ. ಆದರೆ ಕನುಲಿಸಿ,

ಕುಕ್ಕುವು ಮಗನ ಪಕ್ಷವನ್ನೇ ಹಿಡಿದು ವಾದಿಸುತ್ತಿದ್ದರು. ಇದರಿಂದಾಗಿ ಮಗನಬಗ್ಗೆ ಅದಾವುದೋ ಸಂದೇಹ ಅವನ ಮನದಲ್ಲಿ ಕೊರೆಯಹತ್ತಿತು.

ಆತನಿಗೆ ಬೆಳೆ ಚನ್ನಾಗಿ ಬಂದುದರಿಂದ ಅದರ ವ್ಯವಸ್ಥೆಯಲ್ಲಿ ಆತ ತನ್ಮಯನಾಗಿದ್ದ. ಆಗ ಓಲಾನಳು ಅಲ್ಲಿಗೆ ಬಂದಳು. ಆಕೆ ಅಲ್ಲಿಗೆ ಬರದೆ ಬಹಳ ದಿನವಾಗಿತ್ತು. ಆಕೆ ಸೊರಗಿ ಕಡ್ಡಿಯಾಗಿದ್ದಳು. ಗರ್ಭಕೋಶದ ರೋಗವೊಂದು ಬೇರೆ ಗಂಟು ಬಿದ್ದಿತ್ತು. ಆಕೆ ಬಂದವಳೇ "ನಿಮ್ಮೊಡನೆ ನಾನು ಏನು ಹೇಳಶಕ್ಕದ್ದಿದೆ" ಎಂದಳು.

"ಹೂ,"

"ನೀವು ಮನೆಯಲ್ಲಿಲ್ಲದಾಗ ನಿಮ್ಮ ಹಿರಿಯ ಮಗನೆಲ್ಲಿ ಹೋಗು ತ್ತಾನೆ ಗೊತ್ತೇ? ಕಮಲಿನಿ ಇರುವಲ್ಲಿ ಹೋಗುತ್ತಾನೆ."

ಕಮಲಿನಿಯೊಡನೆ ಓಲಾನಳು ಈರ್ಷೆಪಡುತ್ತಾಳೆಂದು ಆತ ಭಾವಿಸು ತ್ತಿದ್ದ. ಆದಕ್ಕಾಗಿ ಆತ "ಹೀಗೇ ಇರಬಹುದು" ಎಂದು ಆಕೆಯನ್ನು ಕಳ ಸಿಬಿಟ್ಟ.

ರಾತ್ರಿ ಕಮಲಿನಿಯ ಬಳಿಗೆ ಹೋದಾಗ ಆಕೆ "ಇಂದು ತುಂಬಾ ಧಗೆ. ಸ್ನಾನ ಮಾಡಿಯಾದರೂ ಬರಬಾರದೇ? ಮೈತುಂಬ ಮಣ್ಣು" ಎಂದಳು.

ಈಗಿತ್ತಲಾಗಿ ಕಮಲಿನಿಯು ಮೊದಲಿನಂತೆ ನಡೆಯುತ್ತಿಲ್ಲವೆಂದು ಆತನಿಗನಿಸುತ್ತಿತ್ತು. ಒತ್ತಾಯಕ್ಕಾಗಿ ಮಾಡಿದಂತೆ ತೋರುತ್ತಿತ್ತು. ಆಕೆ ಇಂದು ಈ ರೀತಿ ನುಡಿದುದಕ್ಕೂ ಓಲಾನಳು ಬೆಳಿಗ್ಗೆ ಒಂದು ಸೂಚನೆ ಕೊಟ್ಟಿದ್ದಕ್ಕೂ ಏನಾದರೂ ಸಂಬಂಧವಿರಬೇಕೆಂದು ಭಾವಿಸಿ "ಹಾಗೇ ಆಗಲಿ. ನೀನೊಬ್ಬಳೇ ಮಲಗು. ನಾನು ಹೊರಗೇ ಮಲಗುತ್ತೇನೆ" ಎಂದನು.

ಆತ ಇನ್ನೊಂದು ಕೋಣೆಗೆ ಹೋಗಿ ಎರಡು ಖುರ್ಚಿಯನ್ನು ಕೂಡಿಸಿ ಆದರ ಮೇಲೆ ಮಲಗಿದ. ಆದರೆ ನಿದ್ದೆ ಬೀಳಲಿಲ್ಲ. ತಲೆಯಲ್ಲೆಲ್ಲ ವಿಚಾ ರಗಳ ತಾಕಲಾಟ. ತನ್ನ ಮಗ ದಕ್ಷಿಣಕ್ಕೆ ಹೋಗಲು ಬಯಸುತಾನೆಂ ಬುದು ಕಮಲಿನಿಗೆ ಹೇಗೆ ತಿಳಿದಿರಬೇಕು?—ಈಗಿತ್ತಲಾಗಿ ಮಗನೂ ಈ ಮಾತು ತೆಗೆಯುತ್ತಿರಲಿಲ್ಲ. ಹಿಂದಿನ ಚಿಂತೆಯೂ ಆತನ ಮೋರೆಯಲ್ಲಿ ಕಾಣುತ್ತಿಲ್ಲ. ಇದಕ್ಕೆಲ್ಲ ಕಾರಣವೇನಿರಬಹುದು—ನಾನೇ ಒಂದು ದಿನ ನೋಡಬೇಕು" ಎಂದು ತೀರ್ಮಾನಿಸಿಕೊಂಡ.

ಮಾರನೇ ದಿನ ತಾನೊಂದು ಅತ್ಯಗತ್ಯದ ಕೆಲಸಕ್ಕಾಗಿ ಪರಊರಿಗೆ ಹೋಗುವೆನೆಂದೂ, ಬೇಗನೇ ತಿರುಗಿ ಬರಲಿಕ್ಕಿಲ್ಲವೆಂದೂ ಎಲ್ಲರಿಗೂ ಕೇಳುವಂತೆ ಹೇಳಿ ಹೊರಟ. ದಾರಿಯಲ್ಲಿ ಮಸಣವಿತ್ತು. ಅದರ ಬದಿಯ ಪೊದೆ ಸವರಿದ. ತುಸು ಹೊತ್ತಾದ ಮೇಲೆ ಮನೆಗೆ ಬಂದು ಸದ್ದಿಲ್ಲದೆ ಕಮಲಿನಿಯ ಕೋಣೆಗೆ ಹೋದ. ಆತ ಏನನ್ನು ನೆನಸಿದ್ದನೋ ಅದು ಸತ್ಯವಾಗಿತ್ತು. ಹಿರಿಯ ಮಗ ಆ ಕೋಣೆಯಲ್ಲಿ ನಿಂತು ಕಮಲಿನಿಯೊಡನೆ ಮಾತಾಡುತ್ತಿದ್ದ. ಆಕೆ ನಗುತ್ತ ನಿಂತಿದ್ದಳು. ಇವನ್ನೆಲ್ಲ ಕಂಡು ವೆಂಗಲುಂಗನಿಗೆ ಸಿಟ್ಟೇರಿತು. ಆದರೂ ತಮ್ಮ ಮಾತಿನಲ್ಲಿ ತಲ್ಲೀನರಾದ ಅವರಿಬ್ಬರೂ ಅತ್ತ ಗಮನಿಸಲಿಲ್ಲ. ಅಷ್ಟರಲ್ಲಿ ಒಮ್ಮಿಂದೊಮ್ಮೆಲೇ ಬಂದ ಕುಕ್ಕುವು ಭಯದಿಂದ ಚೀರಿದಳು.

ವೆಂಗಲುಂಗ ಇಬ್ಬರಿಗೂ ಥಳಿಸಿದ. ಅವರಿಬ್ಬರೂ ಅಲ್ಲಿಂದ ಓಡಿಹೋದ ಹೊರತು ಬಿಡಲಿಲ್ಲ. ಮಾರನೇ ದಿನ ಸಿಟ್ಟು ಇಳಿದಿತ್ತು. ಒಮ್ಮಿಂದೊಮ್ಮೆಲೇ ಮಗನನ್ನು ಮುಂದಿನ ಶಿಕ್ಷಣಕ್ಕಾಗಿ ದಕ್ಷಿಣದೇಶಕ್ಕೆ ಕಳಿಸಿಬಿಟ್ಟ.

೨೫

ಇನ್ನಾವ ತೊಂದರೆಯೂ ಉಪಸ್ಥಿತವಾಗಲಿಕ್ಕಿಲ್ಲೆಂದು ವೆಂಗಲುಂಗ ತಿಳಿದು ಸಮಾಧಾನದಿಂದಿದ್ದ. ಎರಡನೇ ಹುಡುಗ ಮೊದಲನೆಯವನಂತಲ್ಲ. ಈತ ಅಣ್ಣನಷ್ಟು ಉದ್ದನಾಗಿರಲಿಲ್ಲ. ಆತನಷ್ಟು ಸುರೂಪಿಯೂ ಅಲ್ಲ. ಅಲ್ಲದೆ ಆತನಿಗೆ ಕಲಿಯುವದಕ್ಕಿಂತ ವ್ಯಾಪಾರ-ವ್ಯವಹಾರದ ಕಡೆಗೆ ಒಲವು ಹೆಚ್ಚಿತ್ತು. ಅದಕ್ಕಾಗಿ ಆತನನ್ನು ಎಲ್ಲಿಯಾದರೂ ಅಂಗಡಿಕಾರನಲ್ಲಿಟ್ಟರೆ ಸುಧಾರಿಸಬಹುದೆಂದೂ ತನ್ನ ಕಾಳು ಮಾರುವಾಗ ಸಹಾಯಕನಾಗಬಹುದೆಂದೂ ಭಾವಿಸಿ ಆತನನ್ನು 'ಲ್ಯೂ' ಳ ತಂದೆಯ ಬಳಿಯಲ್ಲಿಟ್ಟ. 'ಲ್ಯೂ' ಳ ತಂದೆಗೆ ಕಲಿತ ವ್ಯಕ್ತಿಯೊಬ್ಬ ಬೇಕಾಗಿದ್ದುದರಿಂದ ವೆಂಗನ ಮಗನನ್ನು ಸಂತೋಷದಿಂದಿಟ್ಟುಕೊಂಡ. ಇದರಿಂದ ಅವರ ಬಾಂಧವ್ಯವು ಇನ್ನಷ್ಟು ಹತ್ತಿರದ್ದಾಯಿತು. ತನ್ನ ಮಗನಿಗೆ ವೆಂಗಲುಂಗನ ಮಗಳನ್ನು ತಂದುಕೊಳ್ಳುವದೆಂದೂ ನಿಶ್ಚಯವಾಯಿತು

ಹೀಗೆ ಮಕ್ಕಳಿಗೆ ಒಂದೊಂದು ದಾರಿ ತೋರುವದೆಂದು ಯೋಚಿಸಿ, ಕಿರಿಯ ಮಗನೊಬ್ಬನನ್ನು ಬಿಟ್ಟು ಉಳಿದವರೆಲ್ಲರ ವ್ಯವಸ್ಥೆ ಮಾಡಿದ. ಕಿರಿಯನೊಬ್ಬ ಮನೆಯ ಕೆಲಸಕ್ಕಿರುವುದೇ ವಾಸಿಯೆಂದು ಭಾವಿಸಿದ.

ಈಗ ಆತ ಓಲಾನಳ ಸ್ಥಿತಿಯನ್ನರಿತುಕೊಳ್ಳಲು ಮನಸ್ಸು ಮಾಡಿದ. ಈಗಿತ್ತಲಾಗಿ ಅವಳ ಕಡೆಗೆ ಆತ ಲಕ್ಷ್ಯವನ್ನೇ ಕೊಟ್ಟಿರಲಿಲ್ಲ. ಆಕೆ ಯಾವುದೋ ವೇದನೆಯಿಂದ ಸೊರಗಿದ್ದಳು. ಹೃದಯದಲ್ಲಿ ಯಾವುದೋ ದುಃಖ ಅಥವಾ ಪೀಡೆ ಮನೆಮಾಡಿದೆಯೆಂದು ಯಾರಾದರೂ ಹೇಳುವಂತಿತ್ತು. ಆಕೆ ಹೊಲದಲ್ಲಿ ದುಡಿಯಲು ಈಗಿತ್ತ ಹೋಗಿರಲಿಲ್ಲ. ಟೊಂಕವೂ ನಸು ಬಾಗಿತ್ತು. ಒಂದು ದಿನ ವೆಂಗಲುಂಗ "ನಿನಗೇನಾಗಿದೆ?" ಯೆಂದು ಕೇಳಿದ

"ಅದು ಹಿಂದಿನ ನೋವು. ಎದೆಯೊಂದು ಪೆಟ್ಟಾಗಿತ್ತು" ಎಂದಳು.

"ಹಾಗಾದರೆ ಎಲ್ಲಿಯೂ ಅಡ್ಡಾಡಬೇಡ. ಮಗಳ ಹತ್ತರ ನೀರು ಕಾಸಿ ತರಲು ಹೇಳುತ್ತೇನೆ. ನೀನು ಹೋಗಿ ಮಲಗಿಕೋ?"

ಓಲಾನಳು ಆತನ ಮಾತಿಗೊಪ್ಪಿ ಹಾಸಿಗೆಯ ಮೇಲೆ ಪವಡಿಸಿದಳು. ಆಕೆಯ ನರಳುವಿಕೆ ಹೊರಗೂ ಕೇಳಿಸುತ್ತಿತ್ತು. ಇದರಿಂದ ವೆಂಗಲುಂಗ ನಿಗೂ ದು:ಖವೆನಿಸಿ ಡಾಕ್ಟರನನ್ನು ಕರೆಯ ಕಳುಹಿಸಿದನು.

ಡಾಕ್ಟರ ಬಂದು ನಾಡಿ ನೋಡಿದ. "ಆಕೆಯ ಪುಪ್ಪಸ ಹಾಳಾಗಿದೆ' ಹೊಟ್ಟೆಯಲ್ಲಿ ದೊಡ್ಡ ಕಲ್ಲು ಬೆಳೆದಿದೆ" ಎಂದು ಅಭಿಪ್ರಾಯಪಟ್ಟ.

ವೆಂಗನಿಗೆ ಜೀವದಲ್ಲಿ ಜೀವವಿಲ್ಲದೆ ಹೋಯಿತು. "ಹಾಗಾದರೆ ಔಷಧಕೊಟ್ಟು ತೀವ್ರ ಗುಣಪಡಿಸಿರಿ."

"ಕೇಸು ಅಸಾಧ್ಯ. ೫೦೦ ರೂಪಾಯಿ ಕೊಡುವಂತಿದ್ದರೆ ಗುಣ ಮಾಡಿ ಕೊಡುವೆ."

"ಹೂಂ. ಅಡ್ಡಿಯಿಲ್ಲ."

ಡಾಕ್ಟರನಿಗೆ ಅಂಜಿಕೆಯೆನಿಸಿತು ಗುಣವಾದರೆ ಆಯಿತು. ಇಲ್ಲವಾದರೆ ಆ ದೇಶದ ಕಾಯಿದೆಯಂತೆ ಮರಣ ಶಿಕ್ಷೆಗೆ ಗುರಿಯಾಗಬೇಕಿತ್ತು. "ಇಲ್ಲ. ಇಲ್ಲ. ೫೦೦೦ ರೂಪಾಯಿ ಕೊಡುವಂತಿದ್ದರೆ ಒನ್ಮೆ ಯತ್ನಿಸುವೆ."

೫೦೦೦ ಕೊಟ್ಟರೂ ಅಶಕ್ಯವೆಂದು ವೆಂಗನಿಗನಿಸಿತು. ತನ್ನೆಲ್ಲ ಭೂಮಿ ಮಾರಿದರೆ ೫೦೦೦ ಹುಟ್ಟಬಹುದಿತ್ತು. ಅಷ್ಟು ಮಾಡಿಯೂ ನಿಷ್ಪ್ರಯೋಜಕವಾದರೆ! ಎಂಬ ಅಂಜಿಕೆ ಆತನಲ್ಲಿ ಮನೆಮಾಡಿತು. ಹತ್ತು ರೂಪಾಯಿ ಕೊಟ್ಟು ಡಾಕ್ಟರನನ್ನು ಕಳುಹಿಸಿದ. ವೆಂಗಲುಂಗನಿಗೆ ಅಳು ತಡೆಯಲಾಗ ಲಿಲ್ಲ.

೨೬

ಅವಶ್ಯಕತೆ ಎನಿಸಿದಾಗ ವಸ್ತುವಿನ ಬೆಲೆ ಏರುತ್ತಿದೆ. ವಿಪುಲವಾಗಿ ನೀರು ಸಿಗುವಲ್ಲಿ ಅದಕ್ಕೆ ಬೆಲೆಯಿಲ್ಲ. ನೀರು ಬತ್ತಿತೆಂದರೆ ಅದಕ್ಕೆ ಎಲ್ಲಿಲ್ಲದ ಬೆಲೆ ಬಂದು ಬಿಡುತ್ತಿದೆ.

ಓಲಾನಳು ಹಾಸಿಗೆ ಹಿಡಿಯುವತನಕ ಅವಳಿಂದ ತಮಗೆಷ್ಟು ಪ್ರಯೋಜನವಿದೆಯೆಂದು ಯಾರೂ ಗಮನಿಸಿರಲಿಲ್ಲ. ಈಗ ಬೆಂಕಿ ಉರಿಸಲಿಕ್ಕೂ ಒಬ್ಬರಿಗೂ ಬಾರದು. ಅಲ್ಲಲ್ಲಿಯೇ ಕಸ ರಾಶಿ ಬೀಳುತ್ತಿತ್ತು. ತೆಗೆದರೆ ವೆಂಗಲುಂಗನೇ ತೆಗೆಯಬೇಕಾಗಿತ್ತು. ಕಿರಿಯ ಹುಡುಗಗೇನೋ ತಾಯಿಯ ಶುಶ್ರೂಷೆ ಮಾಡುತ್ತಿದ್ದ. ವೆಂಗಲುಂಗನ ತಂದೆಯಂತೂ ಚಿಕ್ಕ ಹಸುಳೆಯೇ ಆಗಿದ್ದ.

ಓಲಾನಳು ಬಹಳ ದಿನಗಳ ವರೆಗೆ ಹಾಸಿಗೆ ಹಿಡಿದಿದ್ದಳು. ಒಂದು ದಿನ ಹಾಗೆ, ಒಂದು ದಿನ ಹೀಗೆ. ಬದುಕುವಳೆಂಬ ಆಸೆ ತೋರಿದ. ಮಾರನೇ ದಿನವೇ ವೇದನೆ ಮರುಕಳಿಸುತ್ತಿದ್ದುದೂ ಉಂಟು. ವೆಂಗಲುಂಗನಂತೂ ರಾತ್ರಿ ಹಗಲು ಆಕೆಯ ಹಾಸಿಗೆಯ ಬಳಿಯಲ್ಲೇ ಕೂತಿರುತ್ತಿದ್ದ. ಚಳಿಯಾದುದರಿಂದ ಯಾವಾಗಲೂ ಇದ್ದಲಿಯ ಒಲೆ ಉರಿಯುತ್ತಿದ್ದಿತು. ಓಲಾನಳು ಕಷ್ಟದಲ್ಲಿ ಬೆಳೆದವಳು. ಎಂತಹ ಸಮಯದಲ್ಲಿಯೂ ಆಕೆಗೆ ಅತಿವ್ಯಯ ಸೇರುತ್ತಿರಲಿಲ್ಲ. ಅದಕ್ಕಾಗಿ " ಈ ರೀತಿ ಕಷ್ಟಪಡಬೇಡಿ. ಖರ್ಚು ಮಾಡಬೇಡಿ" ಎನ್ನುತ್ತಿದ್ದಳು.

" ಬೇಡ ಪ್ರಿಯೆ. ನಿನಗೆ ಗುಣವಾಗುವಂತಿದ್ದರೆ ಈ ಎಲ್ಲ ಭೂಮಿಯನ್ನಾದರೂ ಮಾರಲು ಹಿಂದೆ ಮುಂದೆ ನೋಡುವಂತಿಲ್ಲ. "

" ಹಾಗೊಂದು ಮಾಡಬೇಡಿ. ನಾನು ಎಂದಾದರೂ ಸಾಯತಕ್ಕವಳೇ. ನನ್ನ ನಂತರವಾದರೂ ಭೂಮಿ ಉಳಿದೀತು " ಎನ್ನುತ್ತಿದ್ದಳು.

ಒಂದು ದಿನ ಆತ ಪೇಟೆಗೆ ಹೋಗಿದ್ದ. ಅಲ್ಲೊಬ್ಬ ಬಡಿಗ ಕರೇ ಬಣ್ಣದ ಶವದ ಪೆಟ್ಟಿಗೆಗಳನ್ನು ತಯಾರಿಸಿಟ್ಟಿದ್ದ. ಒಂದನ್ನು ಕೊಳ್ಳುವುದಕ್ಕಿಂತ ಎರಡನ್ನು ಕೊಳ್ಳುವುದು ಲಾಭಕರವೆಂದೆನಿಸಿದ್ದರಿಂದ ಎರಡು ಪೆಟ್ಟಿಗೆಗಳನ್ನು ಕೊಂಡು ತಂದ.

ಓಲಾನಳು ಬದುಕುವ ಆಸೆ ಕಡಿಮೆಯಾಯಿತು. ಒಂದು ದಿನ ಆಕೆ ಗಂಡನನ್ನು ಕರೆದು " ನನಗೊಂದು ಆಸೆ ಇದೆ. ನನ್ನ ಹಿರೇ ಮಗನನ್ನು

ಸಾಯುವದಕ್ಕಿಂತ ಮೊದಲೊಮ್ಮೆ ಕಣ್ತುಂಬ ನೋಡಬೇಕೆಂದಿದ್ದೇನೆ. "
ನನ್ನ ಸೊಸೆ ಬಂದರೆ ಅವಳಿಗೆಲ್ಲ ತಿಳಿಸಿಕೊಡುವೆ " ಎಂದಳು.

ದಕ್ಷಿಣ ದೇಶಕ್ಕೆ ಕರೆಕಳುಹಿದುದಾಯಿತು. ಮಗನೂ ಬಂದ. ಮದುವೆಯೂ ಆಗಿ ಸೊಸೆ ಬಂದಿತು. ಅತ್ತೆಯ ಸೇವಾ ಶುಶ್ರೂಷೆಗಳನ್ನು ಮಾಡತೊಡಗಿದಳು.

ಈ ರೀತಿ ಮೂರು ದಿನ ಕಳೆಯಿತು. ಆಕೆ ಒಂದು ದಿನ ನವದಂಪತಿಗಳನ್ನು ಕರೆದು " ನನಗಿನ್ನು ಯಾವ ಆಸೆಯೂ ಇಲ್ಲ. ಹಿರಿಯರ ಶುಶ್ರೂಷೆ ಮಾಡಿಕೊಂಡು ಮನೆಯ ಹೆಸರನ್ನು ಮುಂದಕ್ಕೆ ತನ್ನಿ " ಎಂದು ಹರಿಸಿದಳು. ಆಮೇಲೆ ಗಂಡನನ್ನೊಮ್ಮೆ ಕೊನೆಯ ಬಾರಿ ಕಣ್ತುಂಬ ನೋಡಿ ಕಣ್ಣು ಮುಚ್ಚಿದವಳು ಪುನಃ ಕಣ್ಣು ತೆರೆಯಲಿಲ್ಲ.

ಊರ ಜನವೆಲ್ಲ ಬಂದರು. ಮಕ್ಕಳು ಶವದ ಸ್ನಾನ ಮಾಡಿಸಿ ಶವದ ಪೆಟ್ಟಿಗೆಯಲ್ಲಿಟ್ಟರು. ಜೋತಿಷಿಯನ್ನು ಕರೆದು ಕೇಳಲು ಶವದ ದಫನವಿಧಿಗೆ ಮೂರು ತಿಂಗಳ ಮೇಲೆ ಸುಮುಹೂರ್ತವಿದೆಯೆಂದು ಹೇಳಿದ. ಅಲ್ಲಿಯ ತನಕ ದೇವಸ್ಥಾನದಲ್ಲಿ ಬಾಡಿಗೆ ಗೊತ್ತು ಮಾಡಿ ಶವದ ಪೆಟ್ಟಿಗೆಯನ್ನಿಟ್ಟರು.

ನಿಶ್ಚಿತ ತಿಥಿಯಲ್ಲಿ ಅಂತ್ಯವಿಧಿ ತೀರಿಸಿದರು. ಆಮೇಲೆ ವೆಂಗನು ಮಗನನ್ನು ಕರೆದು " ನಿನ್ನ ತಾಯಿ ಇದ್ದಲ್ಲಿ ನೀನು ನಿನ್ನ ಹೆಂಡತಿಯೊಡನೆ ಸಂಸಾರ ಹೂಡು. ಅಲ್ಲಿಯೇ ನಿನ್ನ ತಾಯಿಯು ಜೊತೆಗೆ ನಾನು ಇಷ್ಟೊಂದು ದಿನ ಸುಖದಿಂದ ಸಂಸಾರ ನಡೆಸಿದೆ. ನಿನ್ನ ತಮ್ಮ ತಂಗಿಯಂದಿರೂ ಅಲ್ಲಿಯೇ ಹುಟ್ಟಿದರು " ಎಂದನು.

ವೆಂಗಲುಂಗನ ತಂದೆ ರಾತ್ರಿ ಮಲಗಿದ್ದ. ಬೆಳಗಿನಲ್ಲಿ ಚಹಾಕುಡಿಯಲಿಕ್ಕೆಂದು ಕರೆಯ ಹೋದಾಗ ಆತನ ಪ್ರಾಣಪಕ್ಷಿ ಹಾರಿ ಹೋಗಿ ಎಷ್ಟೋ ಹೊತ್ತಾಗಿದೆಯೆಂದು ತಿಳಿದು ಬಂತು. ಒಮ್ಮೆಲೇ ಎರಡು ಶವದ ಪೆಟ್ಟಿಗೆ ತಂದುದು ನಿರುಪಯೋಗಿಯಾಗಲಿಲ್ಲ. ಆತನನ್ನು ತನ್ನದೇ ಜಾಗೆಯಲ್ಲಿ ಹೂಗಿದು ಇದರ ಹತ್ತಿರವೇ ತನ್ನ ಶವವನ್ನೂ ಹೂಗಿಯಬೇಕೆಂದು ಮಕ್ಕಳಿಗೆ ತಾಕೀತು ಮಾಡಿದೆ.

ಎಲ್ಲರೂ ಬಿಳಿಯ ವರ್ಣದ ಬಟ್ಟೆ ಧರಿಸಿದರು. ವೆಂಗಲುಂಗ ಆ ದಿನ ತುಂಬಾ ಕಣ್ಣೀರು ಕರೆದ.

## ೨೭

ಮದುವೆ, ಮರಣಗಳ ಗದ್ದಲದಲ್ಲಿ ವೆಂಗನಿಗೆ ತನ್ನ ಹೊಲದೆಡೆಗೆ ಲಕ್ಷ್ಯ ಪೂರೈಸಲು ಆಗಿರಲಿಲ್ಲ. ಒಂದು ದಿನ ಚಿಂಗ ಹೊಲದ ಸ್ಥಿತಿಗತಿಯ ಪ್ರಸ್ತಾಪ ತೆಗೆದ.

"ದೇವರು ಕಣ್ಣು ತೆರೆದರೆ ಸಾಕು. ಇನ್ನೂ ಬೇಸಿಗೆಯೇ ಮುಗಿದಿಲ್ಲ. ಈಗಾಗಲೇ ಹೊಲದಲ್ಲೆಲ್ಲ ನೀರು. ಈ ವರ್ಷ ದೊಡ್ಡ ನೆರೆ ಬರುವಂತೆ ಕಾಣುತ್ತಿದೆ. ಹಿಂದೆಂದೂ ಹೀಗೆ ಘಟಿಸಿರಲಿಲ್ಲ."

"ದೇವರಿಂದ ನಮಗೇನೂ ಲಾಭವಾಗುವ ಹಾಗೆ ಕಾಣುವದಿಲ್ಲ. ದೇವರಿಗೆ ಧೂಪ ದೀಪ ನೈವೇದ್ಯ ತೋರಿಸಬಿದ್ದರೂ ಒಂದೇ, ಇಲ್ಲದಿದ್ದರೂ ಒಂದೆ. ಆಗಲಿ. ನಾನೇ ಇಂದು ಹೊಲಕ್ಕೆ ಬರುವೆ. ಏನಾಗಿದೆಯೆಂದಾದರೂ ಒಮ್ಮೆ ನೋಡಿಕೊಳ್ಳೋಣ."

ಇಬ್ಬರೂ ಹೊಲಕ್ಕೆ ಹೋದರು. ಆಗಲೇ ಎಷ್ಟೋ ಗದ್ದೆಗಳಲ್ಲಿ ನೀರು ನಿಂತಿತ್ತು. ಎಂತಹ ನೆಗಸು ಬಂದರೂ ನೀರು ಹತ್ತದಂತಹ ಸ್ಥಳ ನೋಡಿ ಬೀಜ ಬಿತ್ತಿದರು.

ಕೆಲದಿನಗಳಲ್ಲಿಯೇ ಒಂದಾದ ಮೇಲೆ ಒಂದರಂತೆ ಎಲ್ಲ ಊರೂ ನೀರಲ್ಲಿ ಮುಳುಗಿತ್ತು. ವೆಂಗಲುಂಗನ ಮನೆ ಗುಡ್ಡದ ಮೇಲಿತ್ತು. ಆದರಷ್ಟು ಎತ್ತರದಲ್ಲಿ ಇನ್ನಾರ ಮನೆಯೂ ಇದ್ದಿಲ್ಲ. ಆ ವರ್ಷ ಬೆಳೆ ಇಲ್ಲದೆ ಜನ ಸಾಯಹತ್ತಿದರು. ಗಟ್ಟಿಗರಾದವರು ದರೋಡೆಗಾರರ ಸಂಗಡಕ್ಕೆ ಸೇರಿದರು. ಇವರ ಅಂಜಿಕೆಗೆ ಪಟ್ಟಣಿಗರೆಲ್ಲ ರಾತ್ರಿ ಹೊತ್ತು ನಗರದ ಹೆಬ್ಬಾಗಿಲನ್ನು ಮುಚ್ಚಿಯೇ ಇರುತ್ತಿದ್ದರು. ಪೋಲೀಸರ ಸರ್ಪಗಾವಲಿತ್ತು. ಆದರೂ ಅಲ್ಲಲ್ಲಿ ಕೊಳ್ಳೆಯಾಗುತ್ತಲೇ ಇತ್ತು.

ಮುಂದಿನ ವರ್ಷದ ಬೆಳೆಯಾದರೂ ಕೈಗೆ ನಿಲುಕೀತೆಂಬ ಧೈರ್ಯವಿರಲಿಲ್ಲ. ಆದರೂ ಕುಕ್ಕುವು ಮಾತ್ರ ತನ್ನ ದಿನದ ವೆಚ್ಚಕ್ಕೆ ಯಾವ ರೀತಿಯಿಂದಲೂ ವ್ಯತ್ಯಯ ತಂದುಕೊಂಡಿರಲಿಲ್ಲ. ಇದರಿಂದ ಬೇಸರ ಬಂದು ವೆಂಗಲುಂಗ ಒಮ್ಮೊಮ್ಮೆ ಬಯ್ಯುತ್ತಿದ್ದ. ಈಗ ಎಲ್ಲೆಡೆಯಲ್ಲಿಯೂ ನೀರು ತುಂಬಿದುದರಿಂದ ಆಕೆ ಶಹರಕ್ಕೆ ಹೋಗಿ ಬರುವುದು ಕಷ್ಟಾಗಿತ್ತು. ಚಿಂಗನ ಕೈಯ್ಯಲ್ಲೇ ಎಲ್ಲ ಅಧಿಕಾರವಿತ್ತು. ಗೊತ್ತು ಮಾಡಿದಷ್ಟೇ ಧಾನ್ಯವನ್ನು ಆತ ಅವರಿಗೆ ಕೊಡುತ್ತಿದ್ದ. ಆಳುಗಳಿಗೂ ನಿಯಮಿತವಾಗಿ ಧಾನ್ಯ ಸಿಗುತ್ತಿದ್ದುದರಿಂದ ಅವರೆಲ್ಲ ಲುಂಗನ ಕೆಲಸವನ್ನು ತಮ್ಮ ಕೆಲಸವೆಂದೇ ತಿಳಿದು ಮಾಡುತ್ತಿದ್ದರು.

ವೆಂಗಲುಂಗ ಹೊರಗೆ ಕಾಣಿಸುವಷ್ಟು ಬಡವನಿದ್ದಿರಲಿಲ್ಲ. ಅವನಲ್ಲಿ ಸಾಕಷ್ಟು ಹಣವಿತ್ತು. ಆದಕ್ಕಾಗಿ ಜನರು ತನ್ನನ್ನು ತಿರಸ್ಕರಿಸುತ್ತಾರೆಂದೂ ಆತನಿಗೆ ಗೊತ್ತು. ಯಾವಾಗಲೂ ತನ್ನ ಮನೆಯ ಕದನಗಳನ್ನು ಭದ್ರವಾಗಿ ಮುಚ್ಚಿರುತ್ತಿದ್ದನಾದರೂ ತನ್ನ ಚಿಗಪ್ಪನಿರದಿದ್ದರೆ ತೊಂದರೆ ತಪ್ಪುತ್ತಿರಲಿಲ್ಲವೆಂದು ಆತ ಬಲ್ಲ. ಯಾಕಂದರೆ ಅವರ ಚಿಗಪ್ಪನೇ ದರೋಡೆಖೋರರ ಮುಖಂಡನಾಗಿದ್ದ. ಆದುದರಿಂದ ವೆಂಗಲುಂಗನು ಅವರೊಡನೆ ಪ್ರೀತಿಯಿಂದ ನಡೆದುಕೊಂಡಿದ್ದ. ತಾನಿದ್ದ ಹೊರತು ವೆಂಗಲುಂಗನ ಬೇಳೆ ಬೇಯುವಂತಿಲ್ಲವೆಂದು ಆತನ ಚಿಗಪ್ಪನಿಗೆ ಖಚಿತವಾಗುತ್ತ ಹೋದಂತೆಲ್ಲ ಅವನ ಬೇಡಿಕೆ ಬೆಳೆಯುತ್ತಲೇ ಹೋಗುತ್ತಿತ್ತು. ಕುಕ್ಕುವಿನ ಬಳಿಯಲ್ಲಿಯೂ ಅವನ ಹೆಂಡತಿಗೆ ಬೇಕಾದ ಸವಿಯೂಟ ದೊರೆಯದ್ದರಿಂದ ಒಂದಲ್ಲ ಒಂದು ವಿಧದಿಂದ ಗಂಡನನ್ನು ಕೆಣಕಿ ವೆಂಗಲುಂಗನ ಹತ್ತಿರ ಹಣ ಕೇಳುವಂತೆ ಮಾಡುತ್ತಿದ್ದಳು. ಒಂದು ದಿನ ಹೆಂಡತಿಗೆ ಸೀರೆ ಬೇಕೆಂದು ಹಣ ಕೇಳುತ್ತಿದ್ದ. ಇನ್ನೊಮ್ಮೆ ಅಫೀಮಿಗೆ ಬೇಕು ಎನ್ನುತ್ತಿದ್ದ. ಈ ರೀತಿ ಆತನ ಬೇಡಿಕೆ ದಿನ ದಿನಾ ಬೆಳೆಯುತ್ತಿತ್ತು.

ಚಿಗಪ್ಪನ ಮಗನಂತೂ ನಿರುದ್ಯೋಗಿ. ಎಲ್ಲಿ ಹುಡುಗಿಯರನ್ನು ಕಂಡರೂ ಬಿಡುವಂತಿಲ್ಲ. ವೆಂಗನ ಮಗ ಸೊಸೆಯಿಂದರು ತುಂಬ ಪ್ರೀತಿಯಿಂದಿದ್ದರು. ಆತನ ಹೆಂಡತಿಯ ಮೇಲೆ ಚಿಗಪ್ಪನ ಮಗ ಕಣ್ಣಿಟ್ಟಿದ್ದ. ಅದಕ್ಕಾಗಿ ಅವರಿಬ್ಬರಲ್ಲಿ ಮನಸ್ತಾಪ; ದ್ವೇಷ. ಆದರೂ ಅವನ ತಂದೆಯಿಂದಲೇ ತಾವು ಕಳ್ಳ ಕಾಕರ ಭಯವಿಲ್ಲದೆ ಬದುಕಿದ್ದೇವೆಂದು ಅರಿತಿದ್ದುದರಿಂದ ಸುಮ್ಮನಿದ್ದರು.

ವೆಂಗಲುಂಗನ ಕಿರಿಯ ಮಗಳು—ಲ್ಯೂನ ಮನೆಗೆ ಹೋಗಬೇಕಾಗಿದ್ದವಳು ಅತಿ ಚಲುವೆ. ಇದೀಗ ಹರೆಯದ ಹೊಸ್ತಿಲಲ್ಲಿ ಕಾಲಿಕ್ಕುತ್ತಿದ್ದಳು. ಒಮ್ಮೆ ಚಿಗಪ್ಪನ ಮಗ ಆಕೆಯ ಮೇಲೆ ಬಲಾತ್ಕಾರ ನಡೆಸುವುದರಲ್ಲಿದ್ದ. ಅದನ್ನು ವೆಂಗಲುಂಗ ಕಣ್ಣಾರೆ ಕಂಡುದರಿಂದ ಹೇಗಾದರೂ ಮಾಡಿ ಮಗಳನ್ನು ಗಂಡನ ಮನೆಗೆ ಮುಟ್ಟಿಸಲು ಯೋಚಿಸಿದ. ಆದರೆ ಇನ್ನೂ ಲಗ್ನವಾಗಿರಲಿಲ್ಲ. ಅಲ್ಲದೆ ಲ್ಯೂನಿಗೆ ಈ ವರ್ಷ ವ್ಯಾಪಾರದಲ್ಲಿ ಸಾಕಷ್ಟು ಪ್ರಾಪ್ತಿ ಇರದ್ದರಿಂದ ಈ ವರ್ಷ ಲಗ್ನ ಮಾಡಲು ಅನುಕೂಲವಿಲ್ಲವೆಂದು ತಿಳಿಸಿದ್ದ. ಆದರೂ "ಹುಡುಗಿ ಹದಿಮೂರು ವಯಸ್ಸಿನವಳು, ಆಕೆಯ ತಾಯಿಯೂ ಇಲ್ಲ. ಅದಕ್ಕಾಗಿ ನಿಮ್ಮ ವಸ್ತು ನಿಮ್ಮಲ್ಲಿಯೇ ಇರಲಿ, ಅನುಕೂಲವಾದಾಗ ನೀವು ಲಗ್ನ

ಮಾಡಿಕೊಳ್ಳಬಹುದು " ಎಂದ. ಹೇಳಿ ಆಕೆಯನ್ನು ಭಾವೀ ಪತಿಯ ಮನೆ ಯಲ್ಲಿ ಬಿಟ್ಟು ಬಂದ.

೨೮

ಎರಡನೆಯ ಮಗಳೂ ಗಂಡನ ಮನೆ ಸೇರಿದ್ದಳು. ಚಿಗಪ್ಪನಿಗೂ ಬೇಕಾದಂತೆ ಅಫೀಮನ್ನು ಕೊಟ್ಟು ಸಂತೋಷವಾಗಿಟ್ಟಿದ್ದ. ಚಳಿಗಾಲ ಕಳೆದು ನೀರು ಇಂಗುತ್ತ ಕಡಿಮೆಯಾಗುತ್ತ ಸಾಗಿತ್ತು. ವೆಂಗಲುಂಗನ ಸೊಸೆಯೂ ಗರ್ಭಿಣಿಯಾಗಿತ್ತು. ಗರ್ಭಿಣಿಗೆ ಬೇಕಾದ ಬಯಕೆಯನ್ನೆಲ್ಲ ಪೂರೈಸಲು ಚಿಂಗನಿಗೆ ಅಪ್ಪಣೆಯಾಗಿತ್ತು.

ಊರು ಬಿಟ್ಟ ಜನವೆಲ್ಲ ಮರಳಿ ಬಂದರು. ಮಣ್ಣಿನಿಂದ ಮನೆ ಕಟ್ಟು ವುದು ಶಕ್ಯವಿರದ್ದರಿಂದ ಚಾಪೆಗಳಿಂದ ತಮ್ಮ ಗೂಡನ್ನು ಸಜ್ಜುಗೊಳಿಸಿ ದರು. ಎಷ್ಟೋ ಮಂದಿ ವೆಂಗಲುಂಗನ ಹತ್ತರ ಸಾಲ ತೆಗೆದರು. ಬಡ್ಡಿಯ ದರ ಹೆಚ್ಚಾಗಿದ್ದರೂ ಎಲ್ಲರಿಗೂ ಸಾಲ ಸಿಕ್ಕಿತು. ಈ ಸಮಯದಲ್ಲಿ ವೆಂಗ ಲುಂಗನು ಇನ್ನೆಷ್ಟೋ ಭೂಮಿಯನ್ನು ಕೊಂಡುಕೊಂಡ. ಹಣವಿಲ್ಲದವರು— ಭೂಮಿಯಿಲ್ಲದವರು ತಮ್ಮಲ್ಲಿಯ ಹುಡುಗಿಯರನ್ನು ಮಾರಿದರು. ಐದು ಮಂದಿ ದಾಸಿಯರನ್ನು ಕೊಂಡ. ಒಬ್ಬಳನ್ನು ಕಮಲಿನಿಯ ಸೇವೆಗಾಗಿ ನಿಯ ಮಿಸಿದ. ಕಮಲಿನಿಯೂ ಸುಂದರವಾಗಿ ಕಾಣುತ್ತಿದ್ದ ಇದೊಂದು ಬಾಲಿಕೆ ಯನ್ನೂ ಕೊಂಡುಕೊಂಡಳು.

ವೆಂಗಲುಂಗ 'ತಾನೂ ಮುದಕನಾಗುತ್ತ ಬಂದೆ. ಮನೆಯಲ್ಲಿ ತಿನ್ನು ಣ್ಣಲು ಕೊರತೆಯಿಲ್ಲ. ಹೇಳಿದಂತೆ ಕೆಲಸ ಮಾಡಲು ದಾಸ ದಾಸಿಯರಿದ್ದಾರೆ. ನಾನೇಕೆ ಕೆಲಸ ಮಾಡಬೇಕು' ಎಂದು ಯೋಚಿಸುತ್ತಿದ್ದ. ಮನೆಯಲ್ಲಿ ಸಾಕಷ್ಟು ಶಾಂತಿ ನೆಲಸಿದೆಯೆಂದು ಭಾವಿಸಿದ್ದ. ಆದರೆ ಅವನ ಮಗನಿಗೆ ಯಾವಾಗಲೂ ಚಿಗಪ್ಪನ ಮಗನ ಮೇಲೆ ದ್ವೇಷವಿದ್ದೇ ಇತ್ತು; ಹೀಗಾಗಿ ದಿನಾಲು ಒಂದಲ್ಲ ಒಂದು ವಿದ್ರೋಹದ ಘಟನೆ ಕಿವಿಗೆ ಬೀಳುತ್ತಲೇ ಇತ್ತು.

ಒನ್ನೆ ಹಿರಿಯ ಮಗನು "ಅಪ್ಪಾ, ನಾವು ಇಲ್ಲಿರುವುದು ಸರಿಯಲ್ಲ. ಯಾವುದಾದರೊಂದು ಪಟ್ಟಣದಲ್ಲಿ ವಾಸಿಸೋಣ. ಇಲ್ಲಿಯದನ್ನೆಲ್ಲ ಚಿಗಪ್ಪನಿಗೆ ಕೊಟ್ಟು ಬಿಡೋಣ. ಅಂತೂ ಅವನ ಮಗನ ಕಾಕದೃಷ್ಟಿಯಿಂದ ನಮ್ಮಲ್ಲಿಯ ಸ್ತ್ರೀಯರನ್ನು ಬದುಕಿಸೋಣ" ಎಂದ.

" ಎಲಾ ಜಿಪ್ಪೇ ಈ ಮನೆ ನನ್ನದು. ನೀನು ಬೇಕಾದರೆ ಇಲ್ಲಿರು, ಇಲ್ಲವಾದರೆ ಹೊರಟು ಹೋಗು. ಈ ಹೊಲವಿಲ್ಲದಿದ್ದರೆ ನೀನು ಬದುಕುತ್ತಿರಲಿಲ್ಲ. ನಾನು ಇಂತಹ ಶ್ರೀಮಂತನಾದುದು ಈ ಹೊಲದ ಪುಣ್ಯದಿಂದ. ಅದಕ್ಕಾಗಿ ಇದನ್ನೆಲ್ಲ ನಾನೇಕೆ ಬಿಡಲಿ. "

" ಅಪ್ಪಾ, ಹ್ವಾಂಗ ಮಂದಿರವಂತೂ ಹಾಗೇ ಖಾಲೀ ಬಿದ್ದುಕೊಂಡಿದೆ. ಅದನ್ನೇ ಕೊಂಡು ನಾಸಿಸೋಣ. ಇಲ್ಲದ ಗೊಂದಲ ಕಟ್ಟಿಕೊಂಡೇನು ಮಾಡುವೆ ? ಅಪ್ಪಾ ಏನೇ ಆಗಲಿ, ನಾನೆಂದೂ ನಿನ್ನ ಆಜ್ಞೆ ಮೀರುವದಿಲ್ಲ. ಬೇಕಾದರೆ ಆಣೇ ಮಾಡಿ ಹೇಳುತ್ತೇನೆ. ಜುಗಾರಿ ಆಡುವದಿಲ್ಲ; ಅಫೀಮು ತಿನ್ನುವದಿಲ್ಲ. ಪರಸ್ತ್ರೀ ಸಂಗ ಬಯಸುವದಿಲ್ಲ " ಎಂದು ದೈನದಿಂದ ಬೇಡಿಕೊಂಡ.

ವೆಂಗಲುಂಗನಿಗೂ ಹ್ವಾಂಗ ಮಂದಿರದ ಹೆಸರು ಕೇಳಿ ಬಾಯಲ್ಲಿ ನೀರೂರಿತು. ಮದುವೆಯಾಗೇಲು ಹೋದಾಗ ಅಂಜುತ್ತಂಜುತ್ತ ಅದರ ಮೆಟ್ಟಿಲು ಹತ್ತಿದ್ದ. ಅಷ್ಟೇ ಅಲ್ಲ; ಅಲ್ಲಿಯ ಬಾಗಿಲು ಕಾಯುವವನಿಗೂ ಅಂಜಿಕೆಯಿಂದ ಕೈಮುಗಿದಿದ್ದ. ಇದನ್ನು ನೆನಸಿಕೊಂಡಾಗಲೆಲ್ಲ ಆತನಿಗೆ ನಾಚಿಕೆಯೆನಿಸುತ್ತಿತ್ತು. ಅದಕ್ಕಾಗಿ ಅದನ್ನು ಕೊಂಡರೂ ಕೊಂಡು ಬಿಡೋಣ ಎಂದು ಮನಸ್ಸು ಮಾಡಿದ " ಇನ್ನು ಇಂತಹ ಹೊಲಸು ಮಂದಿಯ ಜೊತೆಗೆ ದಿನಗಳೆಯುವವರಲ್ಲಿ ಅರ್ಥವಿಲ್ಲೆ "ಂದೆನಿಸಿತು.

ಅನತಿ ದೂರದಲ್ಲಿಯೇ, ಚಿಗಪ್ಪ ಅಫೀಮು ಸೇವನೆ ನಡಿಸಿದ್ದ. ಅದರ ಸೇವನೆಯಿಂದ ಆತ ತುಂಬಾ ಕ್ಷೀಣವಾಗಿದ ಯಾವಾಗಲೂ ಕೆಮ್ಮುತ್ತಿದ್ದ. ಕೆಮ್ಮಿನ ಜೊತೆಗೆ ರಕ್ತ ಬೀಳುತ್ತಿತ್ತು. ಚಿಗವ್ವಿಯೂ ಅಫೀಮನ್ನು ಸೇವಿಸಿ ಅರ್ಧ ಸತ್ತವರ ಹಾಗೆ ಬಿದ್ದಿರುತ್ತಿದ್ದಳು.

ಇತ್ತ ಅವನ ಮಗನಂತೂ ಹರೆಯದವ. ಇನ್ನೂ ಲಗ್ನವಾಗಿರಲಿಲ್ಲ. ಕಾಮವಾಸನೆಯಿಂದ ಪಶುಗಳನ್ನೂ ಮೀರುವಂತಿದ್ದ. ಆತನಿಗೆ ಹೆತ್ತವರಂತೆ ಅಫೀಮು ಸೇವನೆಯ ಚಟವಿರಲಿಲ್ಲ. ಆದರೂ ವೆಂಗಲುಂಗನಿಗೆ ಅವನ ವಿವಾಹ ಮಾಡುವ ಇಚ್ಛೆ ಇರಲಿಲ್ಲ ಯಾಕಂದರೆ ನಾಯಿಗಿಂತಲೂ ಹೆಚ್ಚು ಮಕ್ಕಳನ್ನು ಹಡೆಯಬಹುದು. ಅಲ್ಲದೆ ಯಾವ ಕೆಲಸಕ್ಕೂ ಬಾರದ ಪ್ರಾಣಿ. ತಾನಾಗಿ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಕೆಲಸ ಮಾಡೆಂದು ಹೇಳುವವರೂ ಇದ್ದಿಲ್ಲ.

ತನ್ನ ಎರಡನೇ ಮಗನಿಗೂ ಈ ವಿಷಯವಾಗಿ ಕೇಳುವುದು ಉಚಿತ ವೆಂದೆನಿಸಿತು. ಆತ ಲ್ಯೂನ ಅಂಗಡಿಯಲ್ಲಿದ್ದ. ವೆಂಗನ ವಿಚಾರವನ್ನು ಆತನೂ ಒಪ್ಪಿದ "ಅಪ್ಪಾ, ನಾವೆಲ್ಲ ಮದುವೆಯಾದ ಮೇಲೆ ಒಂದೇ ಕಡೆಯ ಲ್ಲಿರಲಿಕ್ಕೆ ಹ್ಯಾಂಗ ಮಂದಿರದಂಥ ಸ್ಥಳವೇ ಬೇಕು. ಅದನ್ನು ಕೊಂಡುಕೋ. ಈವಾಗ ನೀನು ನನ್ನ ಮದುವೆಯ ವಿಚಾರದಲ್ಲಿದ್ದೆಯೆಂದು ಕೇಳಿರುವೆ. ಆದರೆ ಅಣ್ಣನಿಗೆ ತಂದಂಥ ಶ್ರೀಮಂತರ ಮಗಳನ್ನು ತರಬೇಡ ಅವರು ಯಾವಾಗಲೂ ತಂದೆಯ ಮನೆ ವೈಭವ ಮರೆತಿರುವದಿಲ್ಲ ಪ್ರತಿಯೊಂದಕ್ಕೂ ತಮ್ಮ ತಂದೆಯ ಮನೆಯಲ್ಲಿ ಹಾಗಿತ್ತು. ಹೀಗಿತ್ತು, ಎನ್ನುತ್ತಾರೆ. ಅದಕ್ಕಾಗಿ ಹಳ್ಳಿಯಲ್ಲಿಯೇ ಎಲ್ಲಿಯಾದರೂ ಹುಡುಕು. ಅಷ್ಟೇನು ಸುಂದರಿಯಾದವಳೇ ಬೇಕೆಂತಿಲ್ಲ. ಅಡಿಗೆ ಮನೆ ಕೆಲಸ ಮಾಡಿಕೊಂಡು ತಂದೆಯ ಮನೆಯಲ್ಲಿಯೂ ಸಾಕಷ್ಟು ಉಣ್ಣಲು ಇದ್ದರೆ ಸಾಕು"

ತಂದೆಗೂ ಹೌದೆನಿಸಿತು. "ಚಿಂಗನಿಗೆ ಎಲ್ಲಾ ಹಳ್ಳಿ ಗೊತ್ತಿದೆ. ಯೋಗ್ಯ ಕನ್ನಿಕೆಯನ್ನು ಆತನೇ ಗೊತ್ತು ಮಾಡಬಹುದು" ಎಂದು ಆಶ್ವಾಸನವಿತ್ತು ಸಂತೋಷದಿಂದ ಹಿಂತಿರುಗಿದ.

ಹ್ಯಾಂಗ ಮಂದಿರವನ್ನು ಕೊಳ್ಳಲು ನಿಶ್ಚಯಿಸಿ ಆ ಮನೆಯನ್ನೊಮ್ಮೆ ನೋಡಿ ಬಂದ

೨೯

ಕೆಲದಿವಸಗಳಲ್ಲಿಯೇ ಮಕ್ಕಳ ಸಹಾಯದಿಂದ ಮನೆಯ ಸಾಮಾನ ನ್ನೆಲ್ಲ ಹ್ಯಾಂಗ ಮಂದಿರಕ್ಕೆ ಸಾಗಿಸಿದ. ಎಲ್ಲರೂ ಹೋದರು. ಆದರೆ ವೆಂಗ ಲುಂಗ ಮಾತ್ರ ಹೋಗಲಿಲ್ಲ. ತಾನು ಹುಟ್ಟಿ ಬೆಳೆದು ದೊಡ್ಡವನಾದ ಆ ಮನೆ ಆ ಭೂಮಿ ಬಿಡಲು ಆತನಿಗೆ ಮನಸ್ಸೊಪ್ಪಲಿಲ್ಲ.

ಕಮಲಿನಿಯು ಇನ್ನು ಮನೆ ತೆರವಾಗಿತ್ತು. ಅದರಲ್ಲಿ ಚಿಗಪ್ಪ ತನ್ನ ಕುಟುಂಬದೊಡನೆ ವಾಸಿಸಹತ್ತಿದ ಮೊದಲಿನ ಮನೆಯಲ್ಲಿಯೇ ಆಳು, ಚಿಂಗ, ವೆಂಗ ಇರಹತ್ತಿದರು

ವೆಂಗಲುಂಗ ಉಂಡು ತಿಂದು ಮಲಗುತ್ತಿದ್ದ. ಈಗ ಆತನಿಗೆ ಯಾವ ತರದ ತೊಂದರೆಯೂ ಇದ್ದಿಲ್ಲ ತ್ರಾಸು ಕೊಡುವವರು ಯಾರೂ ಇದ್ದಿಲ್ಲ. ಕಿರಿಯ ಹುಡುಗನಂತೂ ತಾನಾಯಿತು, ತನ್ನ ಕೆಲಸವಾಯಿತು. ಯಾರ ಗೋಜಿಗೂ ಹೋಗುತ್ತಿರಲಿಲ್ಲ. ಈಗ ಎರಡನೇ ಮಗನ ಲಗ್ನ ಮಾಡುವದೊಂದು ಬಾಕಿ ಇತ್ತು. ಈ ಕೆಲಸವನ್ನು ಚಿಂಗನಿಗೆ ಒಪ್ಪಿಸಿದ.

ಚಿಂಗ ತುಂಬಾ ಮುದಕನಾಗಿದ್ದಾನೆ. ವೆಂಗ ಆತನಿಗೆ ಯಾವ ಕೆಲ ಸಕ್ಕೂ ಹಚ್ಚುತ್ತಿರಲಿಲ್ಲ. ಆದರೂ ಚಿಂಗ ಎಂದಿನಂತೆ ಸ್ವಾಮಿಭಕ್ತನಾಗಿದ್ದ. ಕೊನೆಗೆ ಊರೆಲ್ಲ ಸುತ್ತಾಡಿ ಒಂದು ಒಳ್ಳೆಯ ಕನ್ನಿಕೆಯನ್ನು ಆರಿಸಿ ಬಂದ ಸಾಕಷ್ಟು ವರದಕ್ಷಿಣೆ ಸಿಗುವಂತಿತ್ತು. ಆಕೆಯ ತವರು ಮನೆಯವರೂ ಉಳ್ಳ ವರಾಗಿದ್ದರು. ನೋಡಲಿಕ್ಕೂ ಸುಂದರವಾಗಿ ಸುಧೃಡವಾಗಿದ್ದಳು. ವೆಂಗ ಲುಂಗನೂ ಒಪ್ಪಿದ.

ಮನೆಯಲ್ಲಿ ಹೆಂಗಸರೆನ್ನುವವರು ಯಾರೂ ಇದ್ದಿಲ್ಲ. ಇದರಿಂದ ಚಿಗಪ್ಪನ ಮಗನಿಗೂ ಅಲ್ಲಿರುವುದು ಸೇರುತ್ತಿರಲಿಲ್ಲ. ಅದಕ್ಕಾಗಿ ಒಂದು ದಿನ " ದೂರ ದೇಶದಲ್ಲಿ ಯುದ್ಧವಾಗಲಿದೆ ನಾನು ಸೈನ್ಯಕ್ಕೆ ಸೇರು ತ್ತೇನೆ. ಅಂದರೆ ಜಗತ್ತಿನ ಅನುಭವವಾದರೂ ಬಂದೀತು" ಎಂದು ವೆಂಗ ಲುಂಗನೊಡನೆ ಹೇಳಿದ.

" ಬೇಡವಪ್ಪಾ ಬೇಡ. ನಿನ್ನ ತಂದೆಗೆ ನೀನೊಬ್ಬನೇ ಮಗ. ಈ ಮುದಿ ಕಾಲದಲ್ಲಿ ನೀನೂ ದೂರ ಹೋಗಿಬಿಡಬೇಡ."

" ನನಗೂ ಜೀವದ ಆಶೆಯಿಲ್ಲವೆಂದು ಭಾವಿಸಬೇಡ. ಪ್ರಾಣಕ್ಕೆ ಅಪಾ ಯವೆಂದೆನಿಸಬಹುದಾದ ಸ್ಥಳದಲ್ಲಿ ನಾನು ಇರುವದಿಲ್ಲ. ಅಷ್ಟೇ. ಜಗತ್ತಿನ ಅನುಭವ ಸಾಕಷ್ಟಿಲ್ಲ. ಅದಕ್ಕಾಗಿ ಪರದೇಶವನ್ನಿಷ್ಟು ಸುತ್ತಾಡಿ ಬರುವೆ."

ವೆಂಗಲುಂಗ ಒಪ್ಪಿಗೆಯನ್ನಿತ್ತು, ನಾಕಷ್ಟು ಹಣವನ್ನೂ ಕೊಟ್ಟ. ಮನ ಸ್ಸಿನಲ್ಲಿಯೇ ಪೀಡೆ ದೂರಾದುದಕ್ಕಾಗಿ ಸಂತೋಷಪಟ್ಟುಕೊಂಡ.

ಈಗ ವೆಂಗಲುಂಗನ ಹಿರೆಯ ಸೊಸೆಯ ಪ್ರಸವ ಕಾಲ ಬಂದಿತು. ಅದ ಕ್ಕಾಗಿ ಆತನೂ ಪಟ್ಟಣದ ಮನೆಗೆ ಹೋದ. ಆಗ ತಾನೇ ಪ್ರಸವವೇದನೆ ಆರಂಭವಾಗಿ ನರಳುವ ದನಿ ಕೇಳುತ್ತಿತ್ತು. ಆತನ ಮನಸ್ಸಿನಲ್ಲಿ ದೇವರ ಬಗ್ಗೆ ಭಯ ಉತ್ಪನ್ನವಾಯಿತು. ಅಂಗಡಿಗೆ ಹೋಗಿ ಧೂಪ ದೀಪಗಳನ್ನು ಕೊಂಡು ಭೂದೇವಿಯ ಗುಡಿಗೆ ಹೋಗಿ ಬೇಡಿಕೊಂಡ.

ಅಷ್ಟರಲ್ಲಿ ಮೊಮ್ಮಗ ಹುಟ್ಟಿದ ಸುದ್ದಿ ಬಂದು ಮುಟ್ಟಿತು. ಚೊಚ್ಚಿಲ ಬಸಿರಿಯಾದುದರಿಂದ ವೇದನೆಯಿಂದ ನರಳುತ್ತಿದ್ದಳು. ವೆಂಗಲುಂಗನಿಗೆ ಇಷ್ಟೊಂದು ಮಕ್ಕಳಾಗಿದ್ದರೂ, ಗರ್ಭಿಣಿಯರಿಗೆ ಅತ್ಯಂತ ವೇದನೆಯಾಗು ತ್ತಿದೆಯೆಂದು ಅರಿತಿರಲಿಲ್ಲ. ಯಾಕಂದರೆ ಓಲಾನಳು ಒಂದು ಸಲವೂ ಅತ್ತಿ ರಲಿಲ್ಲ. ಮೂರನೇ ದಿನವೇ ಮನೆಗೆಲಸಗಳನ್ನೆಲ್ಲ ನಿರ್ವಹಿಸುತ್ತಿದ್ದಳು. ಆದರೆ ಈಕೆ ಶ್ರೀಮಂತರ ಮನೆಯಲ್ಲಿ ಬೆಳೆದವಳು. ಕಷ್ಟದ ನೆರಳು ಸಹ ಸೋಂಕಿ

ರಲಿಲ್ಲ. ತನ್ನ ಮಕ್ಕಳಿಗೆ ಹಾಲು ಸಹ ಕುಡಿಸಲು ಗೊತ್ತಿಲ್ಲ. ಅದಕ್ಕಾಗಿ ಮಗು ವಿಗೆ ಮೊಲೆಯುಣ್ಣಿಸಲು ಹೊಸ ದಾಸಿಯೊಂದನ್ನು ಹುಡುಕಬೇಕಾಯಿತು.

ತಿಂಗಳೊಂದು ಕಳೆಯಲು ಹುಡುಗನ ಹುಟ್ಟಿದ ಹಬ್ಬ ಮಾಡಿದರು. ಊರ ಸದ್ಗೃಹಸ್ಥರೆಲ್ಲ ಆಮಂತ್ರಿತರಾಗಿದ್ದರು. ಅವರೆಲ್ಲ ಹೋದ ಬಳಿಕ ವೆಂಗ ಲುಂಗನ ಹಿರಿಯ ಮಗ ಬಂದು '' ಅಪ್ಪಾ, ಬೇರೆ ಶ್ರೀಮಂತರೆಲ್ಲ ಮಾಡು ವಂತೆ ವಂಶದ ಶಿಲಾಲೇಖವೊಂದನ್ನು ನಾನೂ ನೆಡಿಸಬೇಕೆಂದಿರುವೆ. ವರ್ಷ ಕ್ಕೊಮ್ಮೆ ಪೂಜೆ ಮಾಡಬೇಕು ನಮ್ಮದೂ ಈಗ ಮೂರು ತಲೆಗಳೆಯಾ ಯಿತು " ಎಂದನು. ವೆಂಗಲುಂಗನು ಆನಂದದಿಂದ ಸಮ್ಮತಿಸಿದ.

ಕೆಲ ದಿನಗಳಲ್ಲಿಯೇ ಚಿಂಗನ ದೇಹಾವಸಾನವಾಯಿತು. ಆಗ ಅತ್ತಂತೆ ಹಿಂದೆಂದೂ ಅತ್ತಿರಲಿಲ್ಲ. ಆತನ ಬಲಗೈಯೇ ಹೋದಂತಾಯಿತು. ಮನೆಯು ವರಲ್ಲಿ ಯಾರೋ ಸತ್ತಂತೆಯೇ ಚಿಂಗನ ಬಗ್ಗೆ ಅಂತ್ಯಕ್ರಿಯೆ ಜರುಗಿತು.

ವೆಂಗಲುಂಗ ಈಗ ಹೊಲಕ್ಕೂ ಹೋಗುತ್ತಿಲ್ಲ. ಹೋದಾಗಲೆಲ್ಲ ಚಿಂಗನ ನೆನಪಾಗುತ್ತಿತ್ತು. ಮಗನನ್ನೂ ಕರೆದುಕೊಂಡು ಪಟ್ಟಣದಲ್ಲಿಯೇ ಹೋಗಿ ನೆಲಸಿದ ಚಿಗಪ್ಪನನ್ನು ನೋಡಿಕೊಳ್ಳಲು ಒಂದು ಆಳನ್ನು ಇಟ್ಟ.

## ೩೦

ವೆಂಗಲುಂಗನಿಗೆ ತನ್ನ ಇಚ್ಛೆಯೆಲ್ಲ ಪೂರ್ಣವಾದಂತೆನಿಸಿತು. ಗದ್ದೆಯ ಕೆಲಸ ಸುಸೂತ್ರವಾಗಿ ಸಾಗಿ ಹಣ ಬರುತ್ತಿತ್ತು. ಹಿರೇ ಮಗನ ಇಚ್ಛೆಯಂತೆ ಬಡಬಗ್ಗರು ಗುಡಿಸಲು ಕಟ್ಟಿಕೊಂಡಿದ್ದ ಸ್ಥಳವನ್ನೂ ಕೊಂಡರು. ಬಡಬಗ್ಗ ರೆಲ್ಲ ಮನೆ ಬಿಡಬೇಕಾಯಿತು. ಹಿರೇ ಮಗ ಸಿಟ್ಟಿನವನಾದುದರಿಂದ ಅವನು ಹೇಳಿದಷ್ಟೆಲ್ಲ ಹಣ ಕೊಟ್ಟು ಬಿಡುತ್ತಿದ್ದ. ಎಷ್ಟು ಕೊಟ್ಟೆನೆಂದು ಆತನಿಗೇ ಗೊತ್ತಿರುತ್ತಿದ್ದಿಲ್ಲ. ಅದನ್ನು ಕಿರಿಯ ಮಗ ಬಂದು ಹೇಳಿದಾಗಲೇ ಗೊತ್ತಾ ಗುತ್ತಿತ್ತು. ಕಿರಿಯ ಮಗ ವ್ಯಾಪಾರಿ ತಲೆಯವ. ಈ ಭೂಮಿ, ಕೆರೆ, ಗಿಡ ದಿಂದೇನು ಪ್ರಯೋಜನ ? ನೂರಕ್ಕೆ ಇಪ್ಪತ್ತರಷ್ಟೇ ಬಡ್ಡಿ ಸಿಕ್ಕರೂ ಎಷ್ಟೋ ರೂಪಾಯಿಯಾಗುತ್ತಿತ್ತಲ್ಲ ಎಂಬ ವಿಚಾರ ಆತನದು. ಆದರೆ ಹಿರಿಯನ ಬುದ್ಧಿ ಹಾಗಲ್ಲ. ' ನಾವು ಕೇವಲ ಒಕ್ಕಲಿಗರಾಗುವುದರಿಂದೇನು ಪ್ರಯೋ ಜನ ? ನಾವೂ ನಾಲ್ಕು ಜನರಲ್ಲಿ ಸರಿಯುವರೆಂದೆನೆಸಿಕೊಳ್ಳಬೇಕು. ಹಣ ವೊಂದೇ ದೊಡ್ಡಸ್ತಿಕೆಯ ಸಾಧನವಲ್ಲ; ನಮ್ಮ ವಂಶದ ಹೆಸರು ಮುಂದೆ ಬರ ಬೇಕು ' ಎನ್ನುವ ಸಂಪ್ರದಾಯದವ.

ಮಕ್ಕಳಿಬ್ಬರ ಹಾದಿಯೂ ಭಿನ್ನ ಭಿನ್ನವೆಂದು ವೆಂಗನಿಗನಿಸಿತು. ಹಿರಿಯು ನಿಗಂತೂ ಹೊಲದ ಕಸಬು ಗೊತ್ತಿರಲಿಲ್ಲ. ಎರಡನೆಯುವ ವ್ಯಾಪಾರಿ. ಕಿರಿಯ ಹುಡುಗನಾದರೂ ಒಕ್ಕಲಿಗನಾಗಿರಲಿ ಎಂದು ಬಯಸಿದ್ದ. ಆವನಿ ಗೆಲ್ಲಿಯಾದರೂ ಕಲಿಯಲು ಕಳಿಸಬೇಕೆಂದು ಹಿರಿಯ ಹುಡುಗನ ಹಟ. ಕೊನೆಗೆ ಹಿರಿಯುವನ ಹಟವೇ ಗೆದ್ದಿತು.

ಹೊಲದ ಕೆಲಸ ಮಾಡಲಿಕ್ಕೆ ಮನೆಯುವರಾರೂ ಇರದ್ದರಿಂದ ಎರಡ ನೆಯ ಮಗನನ್ನೇ ವ್ಯವಸ್ಥಾಪಕನನ್ನಾಗಿ ನಿಯಮಿಸಿಕೊಂಡ. ಆತ ಒಮ್ಮೆಲೇ ಎಲ್ಲ ಕೆಲಸಗಾರರ ಕೂಲಿಯನ್ನೂ ಕಡಿಮೆ ಮಾಡಿಬಿಟ್ಟ. ತನ್ನ ಲಗ್ನದ ಖರ್ಚಿನಲ್ಲಿಯೂ ಕೈ ಬಿಗಿ ಹಿಡಿದು ಖರ್ಚು ಮಾಡಿದ. ಹಿರಿಯುವನಿಗೆ ಇದೆಲ್ಲ ಸರಿ ಬರಲಿಲ್ಲ.

ಈ ನಾಲ್ಕು ವರ್ಷಗಳಲ್ಲಿ ಮತ್ತೆ ನಾಲ್ಕು ಮೊಮ್ಮಕ್ಕಳು ಹುಟ್ಟಿದರು. ಹಿರಿಯುವನಿಗೆ ಮಕ್ಕಳು ಹುಟ್ಟಿದಾಗಲೆಲ್ಲ ಹೊಸ ಹೊಸ ದಾಸಿಯರನ್ನಿಟ್ಟು ಕೊಳ್ಳಬೇಕಾಗುತ್ತಿತ್ತು. 'ಏನೇ ಆಗಲಿ, ಹೇಗಾದರೂ ಭೂಮಿ ಇದೆ; ತಿನ್ನಲಿ ಕ್ಕೇನು ಕೊರತೆ' ಎನ್ನುತ್ತಿದ್ದ.

ಮೂರನೇ ವರ್ಷ ಅಧಿಕ ಚಳಿ ಬಿದ್ದಿತು. ಚಿಗಪ್ಪನ ದೇಹ ಎಲುಬಿನ ಹಂದರವಾಗಿತ್ತು. ಚಿಗವ್ವಿಯೇ ತುಸು ಗಟ್ಟಿಮುಟ್ಟಿಯಾಗಿದ್ದಳು. ಆಕೆ ವೆಂಗ ನನ್ನು ಕರೆದು "ತನ್ನ ಮಗ ತಿರುಗಿ ಬಂದರೆ ಆತನಿಗೊಂದು ಒಳ್ಳೆಯ ಹೆಣ್ಣು ತಂದು ಮದುವೆ ಮಾಡಬೇಕು" ಎಂದಳು. ವೆಂಗಲುಂಗ ಒಪ್ಪಿದನು.

ಕೆಲವೇ ದಿನಗಳಲ್ಲಿ ಚಿಗಪ್ಪ ಪರಲೋಕವಾಸಿಯಾದ. ಚಿಗವ್ವಿಯನ್ನೂ ಪಟ್ಟಣದ ಮನೆಗೆ ಕರೆತಂದುದಾಯಿತು. ಅವಳ ಸೇವೆಗೆ ಒಂದು ಆಳನ್ನೂ ಇಟ್ಟ.

ಈಗ ಚಿಗಪ್ಪನ ಮಗ ಎಲ್ಲಿದ್ದಾನೆಂಬ ಯೋಚನೆಗಿಟ್ಟಿತು. ಯುದ್ಧವೆಂ ದರೇನೆಂದೂ ಆತನಿಗೆ ಗೊತ್ತಿಲ್ಲ. ಆವನ ಎರಡನೇ ಮಗನೇ ಒಮ್ಮೆ 'ಅಪ್ಪಾ, ಅಕ್ಕಿ ತುಟ್ಟಿಯಾಗಹತ್ತಿದೆ. ದಕ್ಷಿಣದಲ್ಲಿ ಯುದ್ಧ ನಡೆದಿದೆಯಂತೆ. ಯುದ್ಧ ಬೆಳೆಯುತ್ತ ಹೋದಂತೆ ಅಕ್ಕಿ ತುಟ್ಟಿಯಾಗುತ್ತ ನಡೆಯುವದೆ'ಂದು ಹೇಳಿದು ದರ ಜ್ಞಾಪಕವಿತ್ತು.

ಅಷ್ಟರಲ್ಲಿ ಚಿಗಪ್ಪನ ಮಗ ತನ್ನ ಜೊತೆಗೆ ಅನೇಕ ಸೈನಿಕರನ್ನು ಕರೆದು ಕೊಂಡೇ ಬಂದ. ತಾವು ಯುದ್ಧ ಮುಗಿಯುವಲ್ಲಿಯ ವರೆಗೆ ಇಲ್ಲೇ ಇರು ತ್ತೇವೆಂದು ಹೇಳಿದರು. ಊರಲ್ಲಿಯ ಎಲ್ಲ ಮನೆಗಳಲ್ಲಿಯೂ ಸೈನಿಕರೇ ತುಂಬಿ ಹೋಗಿದ್ದರು. ಇಲ್ಲಿಯಂತೂ ಈತನದೇ ಅಧಿಕಾರ. ಹಿರಿಯ ಹುಡು

ಗನಿಗೆ ಹೆಂಗಸರದೇ ಕಾಳಜಿಯಾಗುತ್ತಿತ್ತು. ವಿರೋಧ ಮಾಡಿದವರನ್ನೆಲ್ಲ ಸೈನಿಕರು ಗುಂಡಿಕ್ಕಿ ಕೊಲ್ಲುತ್ತಾರೆಂದು ಕೇಳಿದ.

ಆ ಮೇಲೆ ತಾಯಿಯಿದ್ದಲ್ಲಿಗೆ ಆತನನ್ನು ಕರೆದುಕೊಂಡು ಹೋದರು ಆಕೆ ಹಾಸಿಗೆಯ ಮೇಲೆಯೇ ಅಫೀಮು ಸೇವಿಸುತ್ತ ಮಲಗಿದ್ದಳು. "ಬಂದೆಯಾ ಮಗನೇ, ನಿನಗೂ ಇಷ್ಟು ಕೊಡಿಸುತ್ತೇನೆ" ಎಂದಳು.

"ಬೇಡವಮ್ಮಾ ಬೇಡ, ಇದೇನು ಇಷ್ಟೊಂದು ಸೊರಗಿಬಿಟ್ಟಿಯಲ್ಲಾ. ಏನಾಯಿತು ಇವಳ ಗತಿ ? "

"ಅಫೀಮು ಸೇವಿಸುವುದರಿಂದ ಈ ಗತಿಯಾಗಿದೆ. ಎಷ್ಟು ಬೇಡ ವೆಂದರೂ ಕೇಳುವಂತಿಲ್ಲ."

ಆಮೇಲೆ ಆತನ ದೃಷ್ಟಿ ಅಲ್ಲಿಯ ಹೆಂಗುಸರ ಕಡೆಗೆ ಹೋಗಹತ್ತಿತು. ಇದನ್ನೆಲ್ಲ ಕಂಡು ಕುಕ್ಕುವು ಚಿಗಪ್ಪನ ಮಗನಿಗಾಗಿ ದಾಸಿಯೊಂದನ್ನು ತರು ವುದು ಅವಶ್ಯಕವೆಂದು ವೆಂಗಲುಂಗನಿಗೆ ಸಲಹೆಯಿತ್ತಳು.

ಬೇಕಾದವಳೊಬ್ಬಳನ್ನು ಆರಿಸಿಕೊಳ್ಳಲಿಕ್ಕೆ ಆತನಿಗೇ ಹೇಳಿದರು. ಒಂದೂವರೆ ತಿಂಗಳು ಆತ ಅಲ್ಲಿ ನಿಂತ. ಯುದ್ಧ ಮುಗಿದದ್ದರಿಂದ ಸೈನಿಕರ ನ್ನೆಲ್ಲ ತಿರುಗಿ ಕರೆಯಿಸಿಕೊಂಡರು. ಆದರೆ ಆತನಿಟ್ಟುಕೊಂಡ ದಾಸಿ ಗರ್ಭವ ತಿಯಾಗಿದ್ದಳು. ಆತ ಹೆಮ್ಮೆಯಿಂದ "ನಾನು ತಿರುಗಿ ಬರದಿದ್ದರೂ ನನ್ನ ಪ್ರತಿ ಮೂರ್ತಿಯೊಂದನ್ನು ಸ್ಥಾಪಿಸಿಯೇ ಹೋಗುತ್ತಿದ್ದೇನೆ. ಸೈನಿಕ ಜೀವನದಲ್ಲಿ ಇದೇ ಅತ್ಯಂತ ಮಹತ್ವವಾದದ್ದು. ಸಾದಾ ಮನುಷ್ಯ ಹೋದ ಹೋದಲ್ಲೆಲ್ಲ ಮದುವೆಯಾಗಲಾರ. ಮಕ್ಕಳನ್ನು ಹಡೆಯಲಾರ. ಆದರೆ ಸೈನಿಕನಿಗೆ ಈ ಕಾಳಜಿ ಮಾಡಬೇಕಾದುದಿಲ್ಲ. ಆ ಊರಿಂದ ಹೊರಟು ಹೋದೊಡನೆಯೇ ಬೀಜ ಹುಟ್ಟುತ್ತಿದೆ. ಅದನ್ನು ಇನ್ನಾರಾದರೂ ಸಾಕಿಕೊಳ್ಳುತ್ತಾರೆ" ಎನ್ನುತ್ತಿದ್ದ.

೩೧

ಸೈನಿಕರೆಲ್ಲ ಹೊರಟು ಹೋದ ಮೇಲೆ ಮನೆಯನ್ನೆಲ್ಲ ವ್ಯವಸ್ಥಿತಗೊಳಿ ಸಲಾಯಿತು. ಗೋಡೆಯನ್ನೆಲ್ಲ ಸಾರಿಸಿ ಸಾರಣೆ ಕಾರಣೆ ಮಾಡಿದುದಾಯಿತು. ಚಿಗಪ್ಪನ ಮಗ ಮೆಚ್ಚಿದ ದಾಸಿಯನ್ನು ಆತನ ತಾಯಿಯ ಶುಶ್ರೂಷೆಗೆ ನಿಯ ಮಿಸಲಾಯಿತು. ಆಕೆಗೆ ಸಾಕಷ್ಟು ಹಣವನ್ನೂ ಕೊಟ್ಟ. ಆ ದಾಸಿ ಮದುವೆ ಯಾಗಬೇಕೆಂಬ ಆಸೆಯನ್ನು ವೆಂಗಲುಂಗನಿಗೆ ತಿಳಿಸಿದಳು. ವೆಂಗಲುಂಗ ತನ್ನ ನೌಕರರಲ್ಲೊಬ್ಬನನ್ನು ಕರೆದು ಆಕೆಯ ಆಸೆ ಪೂರ್ತಿ ಮಾಡಿದ.

ಇತ್ತ ಚಿಗವ್ವಿಯೂ ತೀರಿಕೊಂಡಳು. ಮನೆಯಲ್ಲಿ ಮತ್ತೆ ಅಶಾಂತಿ ತಲೆಯೆತ್ತಿದ್ದಿತು. ಇಬ್ಬರೂ ಸೊಸೆಯಂದಿರು ಪರಸ್ಪರ ತಿರಸ್ಕರಿಸುತ್ತಿದ್ದರು. ಕಮಲಿನಿಯೂ ವೆಂಗಲುಂಗನ ಬಗ್ಗೆ ಮೊದಲಿನಂತೆ ಪ್ರೀತಿಯಿಂದಿರಲಿಲ್ಲ. ಮೂರನೆಯ ಹುಡುಗ ಸೈನಿಕನಾಗಬೇಕೆಂದು ಬಯಸಿದ. ಎಷ್ಟು ಹೇಳಿದರೂ ಆತ ತನ್ನ ಹಟ ಬಿಡಲಿಲ್ಲ. ಆ ಹುಡುಗನಿಗೆ ತಾನು ಬಯಸಿದ ಹೆಂಗಸು ದೊರೆಯದ್ದರಿಂದ ಜೀವನದಲ್ಲಿ ವಿರಕ್ತಿಯುಂಟಾಗಿತ್ತು. ಆತ ಸೈನಿಕನಾಗಲು ಹೋಗಿಯೇ ಬಿಟ್ಟ.

ಮನೆಯಲ್ಲೀಗ ಹತ್ತು-ಹದಿನೆಂಟು ಮಕ್ಕಳು ಮೊಮ್ಮಕ್ಕಳು. ಹುಡುಗರೆಲ್ಲ ಸಾಲೆಗೆ ಹೋಗುತ್ತಿದ್ದರು. ಹಿರಿಯ ಹುಡುಗ ಮತ್ತೆ ಚಹಾ ದಂಗಡಿ ಬಳಿ ಸುಳಿಯುತ್ತಿದ್ದ. ಇನ್ನಾರನ್ನೋ ಇಟ್ಟುಕೊಳ್ಳತಕ್ಕವನಿದ್ದಾ ನೆಂದು ಊರಲ್ಲಿ ದಟ್ಟವಾರ್ತೆ ಹಬ್ಬಿತ್ತು. ಮೂರನೆ ಮಗ ಸೈನ್ಯಾಧಿಕಾರಿಯಾ ಗಿದ್ದಾನೆಂದು ತಿಳಿದು ಬಂದಿತು.

ಇನ್ನು ತನ್ನ ದಿನ ಸನ್ನಿಹಿತವಾಯಿತೆಂದೆನಿಸಿತು. ತಾನು ಹುಟ್ಟಿ ಬೆಳೆದ ಮನೆಯಲ್ಲಿಯೇ ಸಾಯುವುದು ಒಳಿತೆಂದು ಭಾವಿಸಿದ್ದುದರಿಂದ ಆತ ತನ್ನ ಹಳೆಯ ಮನೆಗೆ ಹೋದ. ಸಂಗಡ ಕೆಲವು ನೌಕರನ್ನು ಮಾತ್ರ ಕರೆದು ಕೊಂಡು ಹೋಗಿದ್ದ. ತನ್ನ ಸಮಾಧಿ ಮಾಡುವುದರ ಸಲುವಾಗಿ ಸಲಹೆ ಸೂಚನೆ ಕೊಟ್ಟಿದ್ದ.

ಸಾಯುವ ಕಾಲದಲ್ಲಿ ಇಬ್ಬರು ಮಕ್ಕಳು ಬಂದಿದ್ದರು. ತಂದೆಗೆ ನಿದ್ದೆ ಹತ್ತಿದೆಯೆಂದು ತಿಳಿದು ತಮ್ಮಲ್ಲಿ ಮಾತನಾಡಿಕೊಳ್ಳುತ್ತಿದ್ದರು.

" ಈ ಹೊಲ ಮಾರಿ ಬಂದ ಹಣ ನಮ್ಮಿಬ್ಬರಲ್ಲಿ ಹಂಚಿಕೊಳ್ಳೋಣ. ನಾನು ಅಕ್ಕಿಯ ವ್ಯಾಪಾರ ಮಾಡಬೇಕೆಂದು ಬಯಸಿದ್ದೇನೆ" ಎಂದ.

ತಂದೆಗೆ ದುಃಖವಾಯಿತು " ಮೂರ್ಖ ಮಕ್ಕಳಿರಾ, ಹೊಲವನ್ನು ಮಾರುವಿರಾ ? ಹೊಲ ಮಾರಿದಿರೆಂದರೆ ಶ್ರೀಮಂತರ ಮನೆ ಹಾಳಾದಂತೆಯೆ ಸರಿ. "

ಅಪ್ಪನ ಸಮಾಧಾನಕ್ಕಾಗಿ " ಇಲ್ಲ. ಅಪ್ಪಾ, ಹೊಲ ಮಾರುವದಿಲ್ಲ " ಎಂದರು. ಆದರೆ ಹೊರಗೆ ಬಂದು ಇಬ್ಬರೂ ಗಹಗಹಿಸಿ ನಗುತ್ತಿದ್ದರು.

# ಮಂದಿರ

( ಶರತ್ ನಿಳ್ಗತೆಗಳು )



ಅನುವಾದಕರು: ಶ್ರೀಮತಿ ಎಂ. ಎ. ಕುಪ್ಪಮ್ಮ
ಮತ್ತು
ಶ್ರೀ. ಗುರುನಾಥ ಜೋಶಿ

# "ಮಂದಿರ"ದ ಬಗ್ಗೆ ಒಂದೆರಡು ಮಾತು



ನಮ್ಮ ಗ್ರಂಥಮಾಲೆಯ ಎಲ್ಲ ಕಿರಣಗಳಲ್ಲಿ "ಭೂಮಾತೆ" ಚಿಕ್ಕ ದಾಯಿತು. ಈ ಸಂಗತಿಯನ್ನು ಸಂಪಾದಕರ ನುಡಿಯಲ್ಲಿ ಬರೆದೇ ಇದ್ದೇವೆ. ಅಷ್ಟು ಹೊತ್ತಿಗೆ ಮನೋರಂಜನ. ಪ್ರಕಾಶನ ಸಮಿತಿಯವರು "ಮಂದಿರ"ವನ್ನು ಅಚ್ಚು ನಡೆಸಿದ್ದರು. ಅದರ ಸಂಚಾಲಕರು ನಮಗೆ ಸೋಲ್ ಏಜನ್ಸಿಯ ವಿಚಾರಣೆ ಕೇಳಬಂದುದು ಸುಸಂಧಿಯಾಗಿಯೇ ಒದಗಿತ್ತೆನ್ನಬೇಕು. ಏಜನ್ಸಿಯ ಬದಲು ಪ್ರಕಾಶನ ಕಾರ್ಯವನ್ನೇ ನಮಗೆ ಕೊಟ್ಟು ಬಿಡಿರೆಂದು ಬಿನ್ನವಿಸಿಕೊಂಡೆವು. ನಮ್ಮ ಪುಸ್ತಕವು ಚಿಕ್ಕದಾಗಬಾರದೆಂಬ ಸದುದ್ದೇಶವನ್ನರಿತು ಅವರು "ಭೂಮಾತೆ" ಯೊಟ್ಟಿಗೆ 'ಮಂದಿರ" ವನ್ನೂ ಸೇರಿಸಿಕೊಂಡು ಪ್ರಸಿದ್ಧಪಡಿಸಲು ಒಪ್ಪಿಗೆ ಕೊಟ್ಟರು. ಅದಕ್ಕಾಗಿ ಸಂಚಾಲಕರಾದ ಶ್ರೀ ಎಚ್. ಬಿ. ನವಲೂರರಿಗೆ ನಾವು ತುಂಬ ಉಪಕೃತರಾಗಿದ್ದೇವೆ.

ಅನುವಾದವನ್ನು ಮಾಡಿಕೊಟ್ಟ ಶ್ರೀಮತಿ ಕುಪ್ಪಮ್ಮನವರಿಗೂ, ಶ್ರೀ ಗುರುನಾಥ ಜೋಶಿಯವರಿಗೂ ಆಭಾರಿಯಾಗಿದ್ದೇವೆ.

ಬಾಲಚಂದ್ರ ಘಾಣೇಕರ

# ಮಂದಿರ

೧

ಒಂದೂರಿನ ನದಿಯ ತೀರದಲ್ಲಿ ಕುಂಬಾರರ ಎರಡು ಮನೆಗಳಿದ್ದುವು. ನದಿಯಿಂದ ಮಣ್ಣನ್ನು ತಂದು, ಕಲೆಸಿ, ಅಚ್ಚುಗಳಲ್ಲಿ ಹೊಯ್ದು, ಆಟದ ಸಾಮಾನುಗಳನ್ನು ಮಾಡುವುದು, ಪೇಟೆಗೆ ಹೋಗಿ ಈ ಸಾಮಾನುಗಳನ್ನು ಮಾರಾಟ ಮಾಡುವುದು—ಇವೇ ಈ ಮನೆಯವರ ಕೆಲಸ. ಎಂದಿನಿಂದಲೂ ಇವರ ಕೆಲಸವೇ ಇದಾಗಿತ್ತು; ಮತ್ತು ಇದರಿಂದಲೇ ಅವರ ಊಟ-ಉಡಿಗೆ, ಬಟ್ಟೆ-ಬರೆ, ಮುಂತಾದ ಜೀವನ-ನಿರ್ವಾಹವಾಗುತ್ತಿತ್ತು. ಹೆಂಗಸರೂ ಕೆಲಸ ಮಾಡುತ್ತಿದ್ದರು – ನೀರು ತುಂಬುವುದು, ಅಡಿಗೆ ಮಾಡಿ ಪತಿ-ಪುತ್ರರಿಗೆ ಬಡಿಸುವುದು, ಅವಿಗೆಯು ತಣ್ಣಗಾದ ನಂತರ ಆಟದ ಸಾಮಾನುಗಳನ್ನೆಲ್ಲಾ ಅದರಿಂದ ತೆಗೆದು ಒರೆಸುವುದು ಮತ್ತು ಚಿತ್ರಿಸುವುದಕ್ಕೋಸ್ಕರ ಅವುಗಳನ್ನು ತಂದು ಗಂಡಸರ ಮುಂದಿಡುವುದು ಮುಂತಾದ ಎಲ್ಲ ಕೆಲಸಗಳನ್ನು ಮಾಡುತ್ತಿದ್ದರು.

ಶಕ್ತಿನಾಥನು ಈ ಕುಂಬಾರ ಪರಿವಾರದಲ್ಲಿ ತನ್ನದೊಂದು ಸ್ಥಾನವನ್ನು ಮಾಡಿಕೊಂಡಿದ್ದ. ಈ ಬ್ರಾಹ್ಮಣ ಕುಮಾರನು ತನ್ನ ಬಂಧು-ಬಾಂಧವರು, ಆಟ-ಪಾಠ, ಓದು ಬರೆಹ ಎಲ್ಲವನ್ನೂ ಬಿಟ್ಟು, ಒಂದು ದಿನ ಈ ಮಣ್ಣಿನ ಆಟದ ಸಾಮಾನುಗಳಿಗೆ ತನ್ನ ಮನವನ್ನು ಅರ್ಪಿಸಿದನು. ಮಣ್ಣು ಕಲೆಸುವ ಚೂರಿಯನ್ನು ತೊಳೆದಿಡುತ್ತಿದ್ದನು, ಅಚ್ಚುಗಳಲ್ಲಿನ ಮಣ್ಣನ್ನೆಲ್ಲಾ ತೆಗೆದು ಒರೆಸಿಡುತ್ತಿದ್ದನು; ಮತ್ತು ಈ ಆಟದ ಸಾಮಾನುಗಳನ್ನು ಎಷ್ಟು ಅಲಕ್ಷ್ಯದಿಂದ ಚಿತ್ರಿಸುವರೆಂಬುದನ್ನು ಉತ್ಕಂಠಿತ ಹಾಗೂ ಅಸಂತುಷ್ಟಚಿತ್ತದಿಂದ ನೋಡುತ್ತಿದ್ದನು. ಮಸಿಯಿಂದ ಬೊಂಬೆಗಳ ಹುಬ್ಬು, ಕಣ್ಣು, ಬಾಯಿ ಮುಂತಾದವುಗಳನ್ನು ಚಿತ್ರಿಸುತ್ತಿದ್ದರು. ಒಂದರ ಹುಬ್ಬು ದಪ್ಪವೂ ಮತ್ತೊಂದರದು ಅರ್ಧವೂ, ಒಂದರ ಕಣ್ಣು ಚಿಕ್ಕದೂ ಬಾಯಿ ದೊಡ್ಡದೂ ಹೀಗೆಲ್ಲಾ ಆಗುತ್ತಿತ್ತು. ಇದನ್ನೆಲ್ಲಾ ನೋಡಿ ಶಕ್ತಿನಾಥನು ಅಧೀರ ಉತ್ಸುಕತೆಯಿಂದ “ಇಷ್ಟು ಅಲಕ್ಷ್ಯದಿಂದ ಏಕೆ ಚಿತ್ರಿಸುವಿರಿ?” ಎಂದು ಕೇಳುತ್ತಿದ್ದ. ಅದಕ್ಕೆ ಕೆಲಸಗಾರನು ಉತ್ತರ ಕೊಡುತ್ತಿದ್ದ “ಸ್ವಾಮಿ! ಅಂದ

ವಾಗಿ ಚಿತ್ರಿಸಿದರೆ ಹೆಚ್ಚು ದುಡ್ಡು ಖರ್ಚಾಗುವುದು. ಅಷ್ಟು ದುಡ್ಡು ಕೊಟ್ಟು ಯಾರು ಕೊಂಡುಕೊಳ್ಳುವರು? ಮೂರು ಕಾಸಿನ ಸಾಮಾನಿಗೆ ಒಂದಾಣೆಯನ್ನು ಯಾರು ಕೊಡುವರು?”

೨

ಎಷ್ಟು ಯೋಚಿಸಿದರೂ ಈ ಸಹಜವಾದ ಮಾತಿನ ಅರ್ಥವನ್ನು ಶಕ್ತಿನಾಥನು ಪೂರ್ತಿಯಾಗಿ ಗ್ರಹಿಸಲಾರದೆ ಹೋದ. ಬೊಂಬೆಯ ಹುಬ್ಬು ಸರಿಯಾಗಿರಲಿ ಇಲ್ಲದಿರಲಿ, ಕಣ್ಣು ಚಿಕ್ಕದಾಗಿರಲಿ, ದೊಡ್ಡದಾಗಿರಲಿ, ಹೇಗೇ ಇರಲಿ—ಅದರ ಬೆಲೆ ಮೂರು ಕಾಸು! ಇದಕ್ಕಾಗಿ ವ್ಯರ್ಥವಾಗಿ ಏಕೆ ಕಷ್ಟ ಪಡಬೇಕು? ಇದನ್ನು ಕೊಂಡುಕೊಳ್ಳುವವರಾದರೂ ಪುಟ್ಟ ಮಕ್ಕಳು,— ಒಂದೆರಡುಗಳಿಗೆ ಅದನ್ನು ಮುದ್ದಾಡುವರು. ಕುಳ್ಳಿರಿಸುವರು, ಮಲಗಿಸುವರು, ತೊಡೆಯಮೇಲೇರಿಸಿಕೊಳ್ಳುವರು.— ನಂತರ ಅದನ್ನು ಒಡೆದು— ಮುರಿದು ದೂರ ಬಿಸುಡುವರು! ಅಷ್ಟೇ!

ಶಕ್ತಿನಾಥನು ಬೆಳಿಗ್ಗೆ ತನ್ನ ಪಂಚೆಯ ಒಂದು ತುದಿಯಲ್ಲಿ ಕಟ್ಟಿಕೊಂಡಿದ್ದ ಹುರಿಗಾಳು ಮತ್ತು ಸಿಹಿ ಬೂಂದಿಯ ಸ್ವಲ್ಪ ಭಾಗ ಇನ್ನೂ ಉಳಿದಿತ್ತು. ಅದನ್ನು ಬಿಚ್ಚಿ ಒಂದೊಂದೇ ಕಾಳು ಅಗಿಯುತ್ತ, ಅನ್ಯಮನಸ್ಕನಾಗಿ ತನ್ನ ಮುರುಕು ಮನೆಯ ಅಂಗಳವನ್ನು ತಲುಪಿದ. ಮನೆಯಲ್ಲಿ ಯಾರೂ ಇರಲಿಲ್ಲ. ಶಕ್ತಿಗುಂದಿದ ಹಾಗೂ ವೃದ್ಧನಾದ ಅವನ ಪಿತನು ಜಮೀನುದಾರರ ಮನೆಯ ‘ಮದನಮೋಹನ’ ಸ್ವಾಮಿಯ ಪೂಜೆಗಾಗಿ ಹೋಗಿದ್ದನು. ಅಲ್ಲಿಂದ ಅವನು ಅಕ್ಕಿ, ಬೇಳೆ, ಬೆಲ್ಲ, ಬಾಳೆಯ ಹಣ್ಣು ಮತ್ತು ದೇವರಿಗೆ ನೇವೇದ್ಯ ಮಾಡಿದ ಪ್ರಸಾದ ಮುಂತಾದುವನ್ನು ತಂದು, ನಂತರ ಅಡಿಗೆ ಮಾಡಿ, ಮಗನಿಗೆ ಊಟಕ್ಕೆ ಬಡಿಸುತ್ತಿದ್ದನು. ಮನೆಯ ಅಂಗಳವೆಲ್ಲಾ ಸೊಪ್ಪು–ಸದೆ ಮತ್ತು ಮುಳ್ಳು ಗಿಡಗಳಿಂದ ತುಂಬಿ ಹೋಗಿತ್ತು. ಗೃಹಲಕ್ಷ್ಮಿ ಇಲ್ಲದ ಮನೆಯು ನಾಲ್ಕೂ ಕಡೆ ಕಾಡಿನಂತೆ ಕಾಣುತ್ತಿತ್ತು. ಕಾಂತಿಯಿಲ್ಲ! ಕಳೆಯಿಲ್ಲ! ಯಾವುದೊಂದು ಸಾಮಾನಿನಲ್ಲೂ ಅಣೆ–ಅಚ್ಚುಕಟ್ಟಿಲ್ಲ! ವೃದ್ಧ ಮಧುಸೂಧನ ಭಟ್ಟಾಚಾರ್ಯರು ಹಾಗೂ ಹೀಗೂ ದಿನಗಳನ್ನು ತಳ್ಳುತ್ತಿದ್ದರು. ಶಕ್ತಿನಾಥನು ಅನ್ಯಮನಸ್ಕನಾಗಿ ಅಂಗಳದಲ್ಲಿ ಓಡಾಡತೊಡಗಿದನು.

೨

ಪ್ರತಿನಿತ್ಯವೂ ಬೆಳಿಗ್ಗೆ ಶಕ್ತಿನಾಥನು ಕುಂಬಾರರ ಮನೆಗೆ ಹೋಗುವನು. ಇತ್ತೀಚೆಗೆ ಅವನಿಗೆ ಬೊಂಬೆಗಳನ್ನು ಚಿತ್ರಿಸುವ ಅಧಿಕಾರವೂ ಸಿಕ್ಕಿ ಹೋಗಿದೆ. ಕುಂಬಾರನು ಉತ್ತಮವಾದ ಒಂದು ಬೊಂಬೆಯನ್ನು ತೆಗೆದು ಅವನ ಕೈಗೆ ಕೊಟ್ಟು "ಇದನ್ನು ನೀವೇ ಚಿತ್ರಿಸಿರಿ" ಎನ್ನುವನು. ಶಕ್ತಿನಾಥನು ಆ ಒಂದು ಬೊಂಬೆಯನ್ನೇ ಮಧ್ಯಾಹ್ನದ ವರೆಗೂ ಚಿತ್ರಿಸುತ್ತಿದ್ದನು. ಬೊಂಬೆಯು ಅತ್ಯಂತ ಸುಂದರವಾಗಿರುತ್ತಿತ್ತು, ಆಷ್ಟಾದರೂ ಮೂರು ಕಾಸಿಗಿಂತ ಹೆಚ್ಚಾಗಿ ಯಾರೂ ಕೊಡುತ್ತಿರಲಿಲ್ಲ. ಆದರೂ, ಕುಂಬಾರನು ಮನೆಗೆ ಬಂದು "ನೀವು ಚಿತ್ರಿಸಿದ ಬೊಂಬೆಯು ಆರು ಕಾಸಿಗೆ ಮಾರಿ ಹೋಯಿತು." ಎನ್ನುತ್ತಿದ್ದನು. ಶಕ್ತಿನಾಥನ ಆನಂದಕ್ಕೆ ಪಾರವೇ ಇಲ್ಲದಾಗುತ್ತಿತ್ತು.

೩

ಈ ಗ್ರಾಮದ ಜಮೀನದಾರರು ಜಾತಿಯಲ್ಲಿ ಕಾಯಸ್ಥರು. ದೇವ-ದ್ವಿಜರೆಂದರೆ ಅವರಿಗೆ ಬಹಳ ಭಕ್ತಿ. ಅವರ ಮನೆದೇವರು ಮದನಮೋಹನ ಮೂರ್ತಿ. ಅತ್ಯುನ್ನತವಾದ ಒಂದು ಮಂದಿರವನ್ನು ಕಟ್ಟಿಸಿ, ಸ್ವರ್ಣಸಿಂಹಾಸನದ ಮೇಲೆ ಮದನಮೋಹನ ಸ್ವಾಮಿಯನ್ನು ಪ್ರತಿಷ್ಠೆ ಮಾಡಿಸಿದ್ದರು. ಪಕ್ಕದಲ್ಲೇ ಸುವರ್ಣರಂಜಿತೆ ಶ್ರೀರಾಧೆ. ಬೃಂದಾವನ ಲೀಲೆಯ ಅನೇಕ ಸುಂದರ ಹಾಗೂ ಅಪೂರ್ವ ಚಿತ್ರಗಳು ಗೋಡೆಗಳ ಮೇಲೆ ಸುಶೋಭಿಸುತ್ತಿದ್ದುವು. ಮೇಲ್ಛಾವಣಿಗೆಲ್ಲಾ ಅಂದವಾದ ಬಳ್ಳಿಗಳು ಹಬ್ಬಲ್ಪಟ್ಟಿದ್ದುವು. ಒತ್ತಟ್ಟಿಗೆ-ಸ್ಫಟಿಕ ಶಿಲೆಯ ವೇದಿಕೆಯ ಮೇಲೆ ಪೂಜೆಯ ಸಕಲ ಸಾಮಗ್ರಿಗಳೂ ಅಣಿ ಮಾಡಿಡಲ್ಪಟ್ಟಿದ್ದುವು. ಮತ್ತು ನಿತ್ಯ-ನಿವೇದಿತ ಪುಷ್ಪ-ಚಂದನಗಳ ಸುಗಂಧವು ಮಂದಿರವನ್ನೆಲ್ಲಾ ಆಕ್ರಮಿಸಿಕೊಂಡು, ಸ್ವರ್ಗ ಸುಖ ಹಾಗೂ ಸೌಂದರ್ಯದ ನೆನಪನ್ನುಂಟು ಮಾಡಿತ್ತು.

೪

ಅನೇಕ ದಿನಗಳ ಹಿಂದಿನ ಮಾತು. ಜಮೀನದಾರ ರಾಜನಾರಾಯಣ ಬಾಬುಗಳು ಯೌವನದ ಮೇರೆಯಲ್ಲಿ ಕಾಲಿಟ್ಟಾಗ—ತಮ್ಮ ಈ ಜೀವನ ಛಾಯೆಯು ಕ್ರಮೇಣ ದೀರ್ಘ ಮತ್ತು ಅಸ್ಪಷ್ಟವಾಗುತ್ತಿರುವುದೆಂಬುದನ್ನು ಮೊಟ್ಟ ಮೊದಲು ಅರಿತುಕೊಂಡಾಗ—ತಮ್ಮ ಜಮೀನದಾರಿಯ ಧನ ಐಶ್ವರ್ಯ-ಭೋಗಗಳು ದಿನದಿನಕ್ಕೂ ಕಡಿಮೆಯಾಗುತ್ತಿರುವುದೆಂಬುದನ್ನು

ತಿಳಿಸುಕೊಂಡಾಗ-ಒಂದು ದಿನ ತಮ್ಮ ಮಂದಿರದ ಜಗತ್ತಿಟ್ಟಿಗೆ ನಿಂತು, ಅನು ತಾಪದ ಕಂಬನಿಗಳನ್ನು ಸುರಿಸಿದ್ದರು! ಅಂದಿನ ಮಾತ.! ಆಗ ಅವರ ಏಕ ಮಾತ್ರ ಪುತ್ರಿ ಸುವರ್ಣೆಯು ಐದು ವರ್ಷಗಳವಳಾಗಿದ್ದಳು. ಮಧುಸೂದನ ಭಟ್ಟಾಚಾರ್ಯರು ಮಂದಿರದ ಮದನಮೋಹನ ಮೂರ್ತಿಯನ್ನು ಪುಷ್ಪ ಚಂದನಗಳಿಂದ ಅಲಂಕರಿಸಿ ಪೂಜೆ ಮಾಡುವುದನ್ನು ಏಕಾಗ್ರಚಿತ್ತದಿಂದ ನೋಡುತ್ತಿದ್ದಳು. ಮತ್ತು ಆ ಪುಷ್ಪ-ಚಂದನಗಳ ಸ್ನಿಗ್ಧ ಸುಗಂಧವು ತನ್ನನ್ನು ಸ್ಪರ್ಶಿಸಿ ಆಶೀರ್ವದಿಸುತ್ತಿರುವುದೆಂದು ತಿಳಿದು ಆನಂದಿಸುತ್ತಿದ್ದಳು ಅಂದಿ ನಿಂದ ಆ ಬಾಲಕಿಯು ಪ್ರತಿದಿನ ಸಾಯಂಕಾಲವೂ ತನ್ನ ತಂದೆಯ ಸಂಗಡ ದೇವತಾರಾಧನೆಯನ್ನು ನೋಡಲು ಬರುತ್ತಿದ್ದಳು, ಮತ್ತು ಅಲ್ಲಿನ ಮಂಗಳೋ ತ್ಸವಗಳನ್ನು ಮನದಣಿಯೆ ನೋಡಿ, ಒಂದು ಬಗೆಯ ಅಪೂರ್ವ ಆನಂದ ವನ್ನು ಪಡೆಯುತ್ತಿದ್ದಳು.

ಕ್ರಮೇಣ ಸುವರ್ಣೆಯು ದೊಡ್ಡವಳಾಗುತ್ತ ಬಂದಳು. ದೇವರು-ದೊಡ್ಡವರೆಂಬ ಭಾವನೆಯನ್ನು ಚೆನ್ನಾಗಿ ಹೃದಯಂಗಮ ಮಾಡಿಕೊಂಡಳು. ಈ ಮಂದಿರವು ತನ್ನ ಪಿತನ ಅತ್ಯಂತ ಪ್ರಿಯ ವಸ್ತುವೆಂದು ತಿಳಿದು, ತಾನೂ ಅದನ್ನು ಬಹಳವಾಗಿ ಪ್ರೀತಿಸತೊಡಗಿದಳು ದಿನವೆಲ್ಲಾ ಆ ಮಂದಿರದ ಒಳ ಯಲ್ಲೇ ಇರುತ್ತಿದ್ದಳು, ಮತ್ತು ಮಂದಿರದೊಳಗೆ ಒಂದು ಒಣ ಕಡ್ಡಿ ಅಥವಾ ಒಣ ಹೂವು ಸಹ ಬಿದ್ದಿರದಂತೆ ಚೊಕ್ಕಟವಾಗಿ ಇರಿಸುತ್ತಿದ್ದಳು. ಒಂದೇ ಒಂದು ಹನಿ ನೀರು ಸಹ ಬಿದ್ದಿರದಂತೆ ತನ್ನ ಸೀರೆಯ ಸೆರಗಿನಿಂದಲೇ ಒರೆಸುತ್ತಿ ದ್ದಳು. ರಾಜನಾರಾಯಣ ಬಾಬುಗಳ ದೈವ-ನಿಷ್ಠೆಯನ್ನು ಜನರು ಬಹಳ ವಾಗಿ ಹೊಗಳುತ್ತಿದ್ದರು; ಆದರೆ ಸುವರ್ಣೆಯ ಈ ದೇವಸೇವಾಪರಾಯಣ ತೆಯು ಅದನ್ನೂ ಮೀರಿಸಿತು ಹಿಂದಿನ ಪುಷ್ಪ ಪಾತ್ರೆಯಲ್ಲಿ ಈಗ ಹೂವೂ ಹಿಡಿಸುವುದಿಲ್ಲ- ಹೊಸದಾದ ದೊಡ್ಡದೊಂದು ಪುಷ್ಪ ಪಾತ್ರೆಯನ್ನು ತರಿಸಿದ ಹಾಯಿತು. ಚಂದನದ ಪಾತ್ರೆಯನ್ನೂ ಬದಲಾಯಿಸಲಾಯಿತು. ಭೋಜ್ಯ ಮತ್ತು ನೈವೇದ್ಯದ ಪ್ರಮಾಣವೂ ಸಾಕಷ್ಟು ಹೆಚ್ಚಿತು ಅಷ್ಟೇ ಏಕೆ? ನಿತ್ಯ ನೂತನ, ನಾನಾ ಪ್ರಕಾರದ ಪೂಜೆಗಳ ಸಿದ್ಧತೆ ಮತ್ತು ಗಡಿಬಿಡಿಯಲ್ಲಿ ವೃದ್ಧ ಪುರೋಹಿತರು ಸಹ ಗಾಬರಿಗೊಳ್ಳತೊಡಗಿದರು. ಜಮೀನದಾರ ರಾಜ ನಾರಾಯಣ ಬಾಬುಗಳು ಇದೆಲ್ಲವನ್ನೂ ನೋಡಿ ಅತ್ಯಾನಂದಗೊಳ್ಳುತ್ತಿದ್ದರು.

೫

ಮತ್ತು ಸ್ನೇಹ-ಭಕ್ತಿಯುತ, ಗದ್ಗದ ಕಂಠದಿಂದ ನುಡಿಯುತ್ತಿದ್ದರು—“ದೇವರು ತನ್ನ ಸೇವೆಗಾಗಿ ಸ್ವತಃ ಲಕ್ಷ್ಮಿಯನ್ನೇ ನಮ್ಮ ಮನೆಗೆ ಕಳುಹಿಸಿ ಕೊಟ್ಟಿರುವನು! ನೀವು ಯಾರೂ ಏನೂ ಮಾತನಾಡಬೇಡಿ!”

೫

ವಯಸ್ಸಿಗೆ ಸರಿಯಾಗಿ ಸುವರ್ಣೆಯ ವಿವಾಹವೂ ನಡೆಯಿತು. ಮಂದಿರವನ್ನು ಬಿಟ್ಟು ಬೇರೆಡೆಗೆ ಹೋಗಬೇಕಾಗುವುದಲ್ಲಾ ಎಂಬ ಕೊರತೆಯಿಂದಲೇ ಅವಳ ಮುಖದ ಮೇಲಿನ ಮೇಲುನಗೆಯು ಮಾಸಿಹೋಯಿತು. ಅತ್ತೆಯ ಮನೆಗೆ ಕಳುಹಿಸಲು, ಒಳ್ಳೆಯ ಶುಭದಿನವನ್ನು ನೋಡುತ್ತಿದ್ದರು. ಆ ದಿನವೂ ಸಮೀಪಿಸಿತು. ಆದೇ ಆ ದಿನವೆಂದು ಸುವರ್ಣೆಗೂ ತಿಳಿಯಿತು. ಅವಳು ತಂದೆಯ ಬಳಿ ಹೋಗಿ ಹೇಳಿದಳು—“ಅಪ್ಪಾ! ನಾನು ಭಗವಂತನ ಸೇವೆಗಾಗಿ ಮಾಡಿರುವ ಏರ್ಪಾಡುಗಳಲ್ಲಿ ಯಾವ ಬದಲಾವಣೆಯೂ ಆಗದಂತೆ ನೋಡಿಕೊಳ್ಳಿ!”

ವೃದ್ಧ ಪಿತನು ಕಂಬನಿಗರೆದು ನುಡಿದನು—“ಹಾಗೆಯೇ ಆಗಲಿ, ಮಗೂ! ಯಾವ ಬದಲಾವಣೆಯೂ ಆಗುವುದಿಲ್ಲ!”

ಸುವರ್ಣೆಯು ಅಲ್ಲಿಂದ ಹೊರಟಳು. ಅವಳಿಗೆ ಮಾತೇ ಇರಲಿಲ್ಲ; ವೃದ್ಧ ಪಿತನ ಕಣ್ಣುಗಳೆರಡೂ ಕಂಬನಿ ತುಂಬಿದ್ದುವು. ಯೋದ್ಧನು ಯಾವ ರೀತಿ ತನ್ನ ವ್ಯಥಿತ, ಕ್ರಂದನೋನ್ಮುಖ ವೀರಹೃದಯವನ್ನು ಪೌರುಷ-ಶುಷ್ಕ ನಗೆಯಿಂದ ಮುಚ್ಚಿ ಕುದುರೆಯನ್ನೇರಿ ಹೊರಡುವನೋ, ಅದೇ ರೀತಿ ಸುವರ್ಣೆಯೂ ಕರ್ತವ್ಯ-ಶಾಸನವನ್ನು ಶಿರಸಾ ವಹಿಸಿ, ಪಲ್ಲಕ್ಕಿಯಲ್ಲಿ ಕುಳಿತು ಊರನ್ನು ಬಿಟ್ಟು ಹೊರಟಳು. ತನ್ನ ಕಣ್ಣೀರನ್ನು ಒರೆಸಿಕೊಳ್ಳುವಾಗ ಅವಳಿಗೆ ವೃದ್ಧ ಪಿತನ ಕಣ್ಣೀರನ್ನು ಒರೆಸಿ ಬರಲಿಲ್ಲವೆಂದು ನೆನಪಾಯಿತು. ಅದಕ್ಕಾಗಿ ಅವಳು ಮತ್ತಷ್ಟು ಅತ್ತು, ತನ್ನನ್ನು ತಾನೇ ನಿಂದಿಸಿಕೊಂಡಳು. ಪಿತನ ಮನೆಯನ್ನು ಬಿಟ್ಟಾಗಿನಿಂದಲೂ ಅವಳ ಮನಸ್ಸು ಬಹಳ ವ್ಯಸನಗೊಂಡಿತ್ತು. ಅದರಲ್ಲೂ ಒಮ್ಮೊಮ್ಮೆ ಯಾವುದೋ ಗ್ರಾಮಾಂತರ-ಮಂದಿರದ ಘಂಟಾಸ್ವನವು ಕೇಳಿಬಂದಾಗ, ಅವಳಿಗೆ ತನ್ನ ಅಜನ್ಮ ಪರಿಚಿತ ಆರತಿಯು ನೆನಪುಂಟಾಗಿ, ಹೃದಯದಲ್ಲಿ ನಿರಾಶೆಯ ಹಾಹಾಕಾರವುಂಟಾಗುತ್ತಿತ್ತು. ದುಃಖದ ವೇಗವನ್ನು ತಡೆಯಲಾರದೆ ತಡಪಡಿಸುತ್ತ, ಸುವರ್ಣೆಯು ಪಲ್ಲ

ಕ್ಕಿಯ ಬಾಗಿಲನ್ನು ತೆಗೆದಳು. ಸಂಜೆಯ ಆ ಅಂಧಕಾರದಲ್ಲಿ ಅವಳು ಸಿಬಿಡ ವಾಗಿ ಬೆಳೆದಿದ್ದ ದೇವದಾರು ಮರಗಳನ್ನು ನೋಡಿದಳು ಮತ್ತು ಒಂದೊಂದು ಮರವನ್ನು ನೋಡಿದಂತೆಯೂ ಒಂದೊಂದು ಪರಿಚಿತ ಸುಂದಿರದ ಸಮುನ್ನತ ಶಿಖರವನ್ನು ಕಲ್ಪಿಸಿಕೊಳ್ಳುತ್ತ, ದುಃಖದ ವೇಗವನ್ನು ತಡೆಯಲಾಗದೆ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಹಿಂದೆಯೇ ಬರುತ್ತಿದ್ದ, ಅತ್ತೆಯ ಮನೆಯ ಕಡೆಯ ಒಬ್ಬ ದಾಸಿಯು ಮುಂದೆ ಬಂದು ನುಡಿದಳು--- “ ಸೊಸೆಯರೇ! ಹೀಗೇಕೆ ಅಳುತ್ತೀರುವಿರಿ? ಅತ್ತೆಯ ಮನೆಗೆ ಹೋಗದಿರುವವರಾರು? ”

ಸುವರ್ಣೆಯು ತನ್ನ ಎರಡೂ ಕೈಗಳಿಂದಲೂ ಬಾಯನ್ನು ಮುಚ್ಚಿ ಕೊಂಡು, ರೋಧನವನ್ನು ನಿಲ್ಲಿಸಿ, ಪಲ್ಲಕ್ಕಿಯ ಬಾಗಿಲನ್ನು ಮುಚ್ಚಿಕೊಂಡಳು.

ಇದೇ ಸಮಯದಲ್ಲಿ ವೃದ್ಧ ಪಿತನಾದ ರಾಜನಾರಾಯಣನು ಮದನ ಮೋಹನ ಮೂರ್ತಿಯ ಮುಂದೆ ನಿಂತು, ತನ್ನ ಪ್ರಿಯ ಪುತ್ರಿಯ ಅನಿಂದ್ಯ-ಸುಂದರ ಮುಖ-ಛವಿಯನ್ನು ಮನದಲ್ಲೇ ಕಾಣುತ್ತಿದ್ದನು

೬

ಸುವರ್ಣೆಯು ಈಗ ಪತಿ-ಗೃಹದಲ್ಲಿರುವಳು. ಅಲ್ಲಿ ಆಕೆಗೆ ಈಗ ತನ್ನ ಪತಿಯ ಕೂಡ ಸಂಭಾಷಣೆಯನ್ನು ಮಾಡಬೇಕೆಂದು ಇಸಿತೂ ಇಚ್ಛೆಯುಂಟಾಗಲಿಲ್ಲ, ಉತ್ಸುಕತೆಯುಂಟಾಗಲಿಲ್ಲ, ಚಾಂಚಲ್ಯವುಂಟಾಗಲಿಲ್ಲ; ಉಂಟಾಗಿದ್ದರೂ ಪ್ರಕಟವಾಗಲಿಲ್ಲ. ಪ್ರಥಮ ಪ್ರಣಯದ ಸ್ನಿಗ್ಧ ಸಂಕೋಚ ಮತ್ತು ಮಿಲನದ ಉತ್ತೇಜನ ಇವುಗಳಲ್ಲಿ ಯಾವುದೂ ಆಕೆಯ ಕಂದಿದ ಕಣ್ಣುಗಳಲ್ಲಿ ಮೊದಲಿನ ಬೆಳಕನ್ನು ತರಲಿಲ್ಲ. ಮೊದಲಿನಿಂದಲೂ ಪತಿ ಮತ್ತು ಪತ್ನಿ ಇಬ್ಬರೂ ಒಬ್ಬರಿನ್ನೊಬ್ಬರ ಎದುರಿನಲ್ಲಿ ಪರಸ್ಪರ ಅಪರಾಧಿಗಳಾಗಿರುವಂತೆ ಇದ್ದರು. ತಾವು ಮಾಡಿದ ಅಪರಾಧಯಾವುದೊ ಎಂಬುದು ಇಬ್ಬರಿಗೂ ತಿಳಿಯದೆ ಹೋಗಿದ್ದಿತು. ಇದರಿಂದ ಉಂಟಾದ ಪ್ರಸ್ಫುಬ್ಧ ವೇದನೆಯು ತುಂಬಿ ಹರಿಯುವ, ಉಚ್ಛ್ವಾಸಲಿಡುತ್ತಿರುವ ನದಿಯಂತೆ ಇಬ್ಬರ ನಡುವೆ ಒಂದು ದಾಟಿಹೋಗಲು ಬಾರದ ಪ್ರವಾಹವನು ನಿರ್ಮಿಸಿ ಹರಿಯತೊಡಗಿತು

ಒಂದು ದಿನ ಅರ್ಧರಾತ್ರಿ ಸಮಯ. ಅಮರನಾಥನು ಸುವರ್ಣೆಯನ್ನು ಕುರಿತು ಮೆಲ್ಲನೆ ನುಡಿದನು— “ ಸುವರ್ಣ! ನಿನಗೆ ಇಲ್ಲಿರುವುದು ಕಷ್ಟವಾಗುತ್ತಿಲ್ಲವೇ? ”

ಸುವರ್ಣೆಯು ಎಚ್ಚೆತ್ತಿದ್ದಳು. "ಇಲ್ಲ." ಎಂದಳು.

"ಹಾಗಾದರೆ ನಿನ್ನ ತವರು-ಮನೆಗೆ ಹೋಗುವೆಯಾ?"

"ಹೋಗುವೆನು"

"ನಾಳೆಯೇ ಹೋಗಲು ಇಷ್ಟ ಪಡುವೆಯಾ?"

"ಹೋಗುವೆನು."

ಸ್ತಬ್ಧ ಅಮರನಾಥನು ಈ ಉತ್ತರವನ್ನು ಕೇಳಿ ಅವಾಕ್ಕಾದನು. ತುಸು ಹೊತ್ತು ಸುಮ್ಮನಿದ್ದು ನಂತರ ನುಡಿದ-"ಒಂದು ವೇಳೆ ಹೋಗಲಾಗದಿದ್ದರೆ?"

"ಇದ್ದಂತೆಯೇ ಇರುವೆನು!"

ಪುನಃ ಇಬ್ಬರೂ ಸ್ವಲ್ಪ ಸಮಯ ಸುಮ್ಮನಿದ್ದರು. ಅಮರನಾಥನು "ಸುವರ್ಣ!" ಎಂದು ಕೂಗಿದ.

ಅನ್ಯಮನಸ್ಕಳಾಗಿ ಸುವರ್ಣೆಯು "ಏನು?" ಎಂದು ಕೇಳಿದಳು.

"ಹಾಗಿದ್ದರೆ ನಿನಗೆ ನನ್ನ ಆವಶ್ಯಕತೆಯೇ ಇಲ್ಲವೇ?"

ಸುವರ್ಣೆಯು ಮುಖದ ಮೇಲೆ ಮುಸುಕನ್ನೆಳೆದುಕೊಂಡು, ಆರಾಮ ದಿಂದ ಮಲಗಿಕೊಳ್ಳುತ್ತ ಹೇಳಿದಳು— "ಈ ಮಾತುಗಳಿಂದ ದೊಡ್ಡ ಜಗಳಕ್ಕೆ ಆಸ್ಪದವಾಗುತ್ತದೆ. ಈ ಮಾತುಗಳನ್ನೆಲ್ಲ ಆಡಬೇಡಿ!"

"ಜಗಳವಾಗುತ್ತದೆಯೇ?-ಈ ವಿಷಯ ನಿನಗೆ ಹೇಗೆ ಗೊತ್ತಾಯಿತು?"

"ನನಗೆ ಗೊತ್ತು. ನಮ್ಮ ತವರು ಮನೆಯಲ್ಲಿ ನಮ್ಮ ಚಿಕ್ಕಣ್ಣ ಮತ್ತು ಅತ್ತಿಗೆಯಲ್ಲಿ ಪ್ರತಿನಿತ್ಯವೂ ಇದೇ ವಿಷಯವಾಗಿ ಜಗಳವಾಗುತ್ತದೆ; ನನಗೆ ಜಗಳ-ಕದನಗಳು ಇಷ್ಟವಿಲ್ಲ!"

ಈ ಮಾತುಗಳನ್ನು ಕೇಳಿ ಅಮರನಾಥನು ಉತ್ತೇಜಿತನಾದನು. ಕತ್ತಲೆ ಯಲ್ಲಿ ತಡವರಿಸುತ್ತ ಇದುವರೆವಿಗೂ ಅವನು ಇದೇ ವಿಷಯವನ್ನು ಹುಡು ಕುತ್ತಿದ್ದನು; ಇಂದು ಅವನ ಕೈಗೆ ಸಿಕ್ಕಿತು! ಉತ್ತೇಜಿತನಾಗಿ ನುಡಿದನು. "ಬಾ, ಸುವರ್ಣ! ನಾವೂ ಜಗಳವಾಡೋಣ! ಹೀಗಿರುವುದಕ್ಕಿಂತ ಜಗಳ ವಾಡುತ್ತಿರುವುದು ಸಾವಿರ ಪಾಲು ಮೇಲು!"

ಸುವರ್ಣೆಯು ಸ್ಥಿರ ಭಾವದಿಂದ ನುಡಿದಳು "ಛಿ! ಜಗಳ ಏಕಾದ ಬೇಕು? ಹೋಗಿ! ನೀವು ಮಲಗಿಕೊಳ್ಳಿ!"

ನಂತರ ಸುವರ್ಣೆಯು ಮಲಗಿಕೊಂಡಳೇ ಅಥವಾ ಎಚ್ಚೆತ್ತಿದ್ದಳೇ ಎಂಬ ವಿಷಯವನ್ನು ಅಮರನಾಥನು ರಾತ್ರಿಯೆಲ್ಲಾ ಎಚ್ಚೆತ್ತಿದ್ದರೂ ತಿಳಿಯುಲಾರದೆ ಹೋದನು.

ಮುಂಜಾನೆಯಿಂದ ರಾತ್ರಿಯವರೆವಿಗೂ, ಸುವರ್ಣೆಯ ದಿನವೆಲ್ಲಾ ಕೆಲಸ-ಕಾರ್ಯ ಮತ್ತು ಜಪ-ತಪಗಳಲ್ಲೇ ಕಳೆದು ಹೋಗುತ್ತಿದೆ. ಸರಸ-ಸಲ್ಲಾಪ, ಮತ್ತು ಹ್ಯಾಸ-ಕೌತುಕಗಳಗಲ್ಲಿ ಅವಳು ಸ್ವಲ್ಪವೂ ಶ್ರದ್ಧೆ ವಹಿಸುತ್ತಿರಲಿಲ್ಲ. ಇದನ್ನು ಕಂಡು ಅವಳ ಸಂಗಡಿಗರೆಲ್ಲರೂ ಎಷ್ಟೊಷ್ಟೋ ಹ್ಯಾಸ ಮಾಡುತ್ತಿದ್ದರು; ನಾದಿನಿಯರು 'ಸನ್ಯಾಸಿನಿ' ಎಂದು ಪರಿಹಾಸ್ಯ ಮಾಡುತ್ತಿದ್ದರು. ಅಷ್ಟಾದರೂ ಅವಳು ಅವರ ಗುಂಪಿನಲ್ಲಿ ಸೇರುತ್ತಿರಲಿಲ್ಲ; 'ದಿನಗಳು ವ್ಯರ್ಥವಾಗಿ ಕಳೆದು ಹೋಗುತ್ತಿರುವುವಲ್ಲಾ !' ಎಂದು ಯೋಚಿಸುತ್ತಿದ್ದಳು. ಪೂರ್ಣ ಚಂದ್ರನನ್ನು ಕಂಡ ಸಮುದ್ರದಂತೆ—ಅವಳ ಪ್ರತ್ಯೇಕ ರಕ್ತ ಬಿಂದುವಿನಲ್ಲೂ, ಆ ಪಿತೃ-ಪ್ರತಿಷ್ಠಿತ ಮಂದಿರದ ಕಡೆಗೆ ಓಡಿ ಹೋಗಬೇಕೆಂಬ ತೀವ್ರ ಆಶೆಯು ಉಕ್ಕುತ್ತಿರುವಾಗ, ಅದನ್ನು ಅವರು ಹೇಗೆ ತಡೆಯಬಲ್ಲಳು ? ಮನೆಯ ಕೆಲಸ-ಕಾರ್ಯ, ಸಂಗಡಿಗರ ಹಾಸ್ಯ-ಪರಿಹಾಸ್ಯ ಯಾವುದೂ ಅವಳನ್ನು ತಡೆದಿರಿಸಲಾರದೆ ಹೋಯಿತು. ಅವಳ ಕ್ಷುಬ್ಧ, ಅಸ್ವಸ್ಥ ಚಿತ್ತವು ಒಂದು ಭಾರಿಯ ಭ್ರಾಂತಿಯನ್ನು ತಲೆಯ ಮೇಲೆ ಹೊತ್ತು, ಕಷ್ಟಪಡುತ್ತಿತ್ತು; ಹೀಗಿರುವಲ್ಲಿ, ಪತಿಯ ಪ್ರೀತಿ-ಆದರ ಮತ್ತು ಸ್ನೇಹ, ಪರಿಜನವರ್ಗದ ಪ್ರೀತಿ ಸಂಭಾಷಣೆ ಮುಂತಾದುವುಗಳು ಅವಳ ಮನಸ್ಸನ್ನು ಹೇಗೆ ಹೊಕ್ಕಾವು ? ಕೇವಲ ದೈವಸೇವೆಯಿಂದ ನಾರೀತ್ವದ ಕರ್ತವ್ಯವು ಪರಿಪೂರ್ಣವಾಗಲಾರದೆಂಬುದನ್ನು ಅವಳು ಹೇಗೆ ತಿಳಿಯಬಲ್ಲಳು ?

೭

ಬೆಳಿಗ್ಗೆ ಸುಮಾರು ಒಂಭತ್ತು ಗಂಟೆಯ ಸಮಯ. ಅಮರನಾಥನು ಪತ್ನಿಗಾಗಿ ಒಂದು ಉಪಹಾರ ವಸ್ತುವನ್ನು ತೆಗೆದುಕೊಂಡು ಬಂದಿದ್ದ. ಸುವರ್ಣೆಯು ಆಗ ತಾನೇ ಸ್ನಾನಮಾಡಿ, ಪೂಜೆಗೆಂದು ಹೋಗುತ್ತಿದ್ದಳು. ಕಂಠಸ್ವರವನ್ನು ಸಾಧ್ಯವಾದಷ್ಟೂ ಮಧುರ ಮಾಡಿಕೊಂಡು ಅಮರನಾಥನೆಂದ, "ಸುವರ್ಣ! ನಿನಗಾಗಿ ಒಂದು ಉಪಹಾರ ವಸ್ತುವನ್ನು ತಂದಿರುವೆನು. ದಯವಿಟ್ಟು ತೆಗೆದುಕೊಳ್ಳುವೆಯಾ ? "

ಸುವರ್ಣೆಯು ಮುಗುಳುನಗೆ ನಗುತ್ತ "ತೆಗೆದುಕೊಳ್ಳದೆ ಏನು ?" ಎಂದಳು.

ಅಮರನಾಥನ ಕೈಗೆ ಚಂದ್ರನೇ ಸಿಕ್ಕಿದಂತಾಯಿತು. ಅವನು ಅತ್ಯಾನಂದದಿಂದ, ಸೊಗಸಾದ ವಸ್ತ್ರದಲ್ಲಿ ಸುತ್ತಿರಿಸಿದ್ದ ಒಂದು ಅಂದವಾದ ಟಾಯಿಲೆಟ್ ಪೆಟ್ಟಿಗೆಯನ್ನು ಹೊರಗೆ ತೆಗೆದನು; ಮತ್ತು ಅದರ ಮುಚ್ಚಳವನ್ನು ತೆಗೆಯತೊಡಗಿದನು ಪೆಟ್ಟಿಗೆಯ ಮೇಲ್ಭಾಗದಲ್ಲಿ ಸುವರ್ಣಾಕ್ಷರದಿಂದ ಸುವರ್ಣೆಯ ಹೆಸರು ಕೆತ್ತಲ್ಪಟ್ಟಿತ್ತು. ಈ ಸಮಯದಲ್ಲೊಮ್ಮೆ ಸುವರ್ಣೆಯ ಮುಖವನ್ನು ನೋಡಬೇಕೆಂದು ಅಮರನಾಥನಿಗೆನಿಸಿತು. ಅವಳ ಕಡೆ ತಿರುಗಿ ನೋಡಿದನು; ಆದರೆ ಸುವರ್ಣೆಯು ನೆಟ್ಟ ಕಣ್ಣುಗಳಿಂದ ಮುರಮುರನೆ ಅವನನ್ನೇ ನೋಡುತ್ತಿದ್ದಳು! ಇದನ್ನು ಕಂಡು ಅವನ ಉತ್ಸಾಹವೆಲ್ಲ ಹಾರಿಹೋಯಿತು; ನಾಚಿಕೆಯಿಂದ ಮುಖವೆಲ್ಲ ಕೆಂಪಾಯಿತು. ಅಷ್ಟಾದರೂ ಅವನು ಅರ್ಥಹೀನವಾದ ಒಣನಗೆಯನ್ನು ನಗುತ್ತ, ಪೆಟ್ಟಿಗೆಯ ಮುಚ್ಚಳವನ್ನು ತೆಗೆದು ಅದರಲ್ಲಿದ್ದ ಸಾಮಾನುಗಳನ್ನು ಒಂದೊಂದಾಗಿ ತೆಗೆಯಲಾರಂಭಿಸಿದನು. ಸುವರ್ಣೆಯು ಅವನನ್ನು ಅಷ್ಟಕ್ಕೇ ತಡೆದು "ಇದನ್ನೆಲ್ಲಾ ನನಗಾಗಿ ತಂದಿರುವಿರಾ ?" ಎಂದಳು.

"ಹೌದು! ನಿನಗೋಸ್ಕರವೇ ತಂದಿರುವೆನು. ದಿಲ್‌ಖುಷ್ ಸೀಸೆಗಳು"--

"ಪೆಟ್ಟಿಗೆಯನ್ನು ಸಹ ನನಗೇ ಕೊಟ್ಟುಬಿಟ್ಟಿರಾ ?"

"ಹೌದು !"

"ಹಾಗಿದ್ದರೆ ಎಲ್ಲವನ್ನೂ ಸುಮ್ಮನೆ ಹೊರಗೇಕೆ ತೆಗೆಯುವಿರಿ? ಪೆಟ್ಟಿಗೆಯಲ್ಲೇ ಇರಲಿ!"

"ಒಳ್ಳೆಯದು! ಪೆಟ್ಟಿಗೆಯಲ್ಲೇ ಇಟ್ಟಿರುವೆನು. ನೀನು ಇದನ್ನು ಉಪಯೋಗಪಡಿಸಿಕೊಳ್ಳುವೆಯಷ್ಟೆ?"

ಇದ್ದಕ್ಕಿದಂತೆ ಸುವರ್ಣೆಯ ಹುಬ್ಬುಗಳು ಗಂಟಿಕ್ಕಿದುವು. ಪ್ರಪಂಚದೊಡನೆ ಹೋರಾಡಿ ಕ್ಷತ-ವಿಕ್ಷತವಾಗಿದ್ದ ಅವಳ ಹೃದಯವು ವೈರಾಗ್ಯವನ್ನು ಗ್ರಹಿಸಿ, ಏಕಾಂತದಲ್ಲಿ ಕುಳಿತಿತ್ತು; ಹೀಗಿರುವಲ್ಲಿ ಈ ಸ್ನೇಹದ ಅನುರೋಧವು ಅವಳ ಹೃದಯವನ್ನು ಕುತ್ಸಿತ ಪರಿಹಾಸದಂತೆ ಆಘಾತಿಸಿತು. ಅವಳು

ಚಂಚಲ ಚಿತ್ತಳಾಗಿ, ಕೋಪದಿಂದ “ಇಟ್ಟುಬಿಡಿರಿ! ನಷ್ಟವೇನೂ ಆಗುವುದಿಲ್ಲ. ನಾನಲ್ಲದಿದ್ದರೆ ಬೇರೆ ಅನೇಕರು ಇದನ್ನು ಉಪಯೋಗಪಡಿಸಿಕೊಳ್ಳುವರು!” ಎಂದು ನುಡಿದು, ಉತ್ತರವನ್ನು ನಿರೀಕ್ಷಿಸದೆ, ಪೂಜೆಗಾಗಿ ದೇವರ ಮನೆಗೆ ಹೊರಟು ಹೋದಳು. ಅಮರನಾಥನು ವಿಹ್ವಲನಾಗಿ, ಆ ಅಸ್ವೀಕೃತ ಉಪಹಾರದ ಮೇಲೆ ಕೈಗಳನ್ನಿರಿಸಿಕೊಂಡು ಬಹಳ ಹೊತ್ತಿನವರೆಗೆ ಹಾಗೆಯೇ ಕುಳಿತಿದ್ದನು. ಅನೇಕ ಬಾರಿ ಮನಸ್ಸಿನಲ್ಲಿ ತನ್ನನ್ನು ತಾನೇ ತಿರಸ್ಕರಿಸಿಕೊಂಡನು. ತುಸು ಹೊತ್ತಿನ ಬಳಿಕ ಒಮ್ಮೆ ನಿಟ್ಟುಸುರೆಳೆದು “ಸುವರ್ಣ! ನೀನು ಪಾಷಾಣ ಹೃದಯಿ!” ಎಂದನು. ಅವನ ಕಣ್ಣುಗಳು ಕಂಬನಿ ದುಂಬಿದವು; ಕುಳಿತಿದ್ದಂತೆಯೇ ಅನೇಕ ಬಾರಿ ಕಣ್ಣುಗಳನ್ನೊರೆಸಿಕೊಂಡನು. ಸುವರ್ಣೆಯು ಸ್ಪಷ್ಟವಾಗಿ ಉಪಹಾರವನ್ನು ಬೇಡವೆಂದು ಬಿಟ್ಟಿದ್ದರೆ ಅದರ ರೀತಿಯೇ ಬೇರೆಯಾಗುತ್ತಿತ್ತು. ಅವಳು ಉಪಹಾರವನ್ನು ಪೂರ್ತಿಯಾಗಿ ಅಸ್ವೀಕಾರ ಮಾಡದಿದ್ದರೂ, ಅಸ್ವೀಕಾರದ ಅಗ್ನಿಯನ್ನು ಹೊತ್ತಿಸಿ ಬಿಟ್ಟಳು. ಇದರ ಪ್ರತೀಕಾರವನ್ನು ಅವನು ಯಾವ ರೀತಿ ತೀರಿಸಿಕೊಳ್ಳುವನು? ಸುವರ್ಣೆಯನ್ನು ಪೂಜೆಯ ಆಸನದಿಂದ ಎಳೆತಂದು, ಅವಳು ತಿರಸ್ಕರಿಸಿದ ಉಪಹಾರವನ್ನು ಅವಳೆದುರಿಗೇ ಚೂರು ಚೂರು ಮಾಡಿ, ಇನ್ನು ಅವಳ ಮುಖವನ್ನು ನೋಡುವುದಿಲ್ಲವೆಂದು ಭೀಷಣ ಪ್ರತಿಜ್ಞೆ ಮಾಡುವನೇ? ಏನು ಮಾಡುವನು? ಏನ್ನು ಯೋಚಿಸುವನು? ಎಲ್ಲಿಗೆ ಓಡಿ ಹೋಗುವನು? ಭಸ್ಮಧಾರಣೆ ಮಾಡಿಕೊಂಡು ಸನ್ಯಾಸಿಯಂತೆ ಹೊರಟು ಹೋಗುವನೇ? ಈ ರೀತಿ ಎಷ್ಟೋ ಸಂಭವ-ಅಸಂಭವವಾದ ವಿಷಯಗಳು, ಉತ್ತರ-ಪ್ರತ್ಯುತ್ತರಗಳು, ವಾದ-ಪ್ರತಿವಾದಗಳು ಅವನ ಅಪಮಾನಪೀಡಿತ ಹೃದಯದಲ್ಲಿ ಉತ್ಪನ್ನವಾದುವು. ಇವೆಲ್ಲದರ ಪರಿಣಾಮವಾಗಿ ಅವನು ಕುಳಿತಲ್ಲೇ ಬಹಳ ಹೊತ್ತಿನವರೆಗೆ ಅಳುತ್ತಿದ್ದನು!

೮

ಎರಡು ದಿನ, ಎರಡು ರಾತ್ರಿಗಳು ಕಳೆದುವು; ಅಮರನಾಥನು ಮನೆಗೆ ಮಲಗುವುದಕ್ಕೆ ಬರಲಿಲ್ಲ. ತಾಯಿಗೆ ಈ ವಿಷಯ ತಿಳಿಯಲಾಗಿ, ಅವಳು ಸೊಸೆಯನ್ನು ಕರೆದು ಸ್ವಲ್ಪ ಗದರಿಸಿದಳು, ಮತ್ತು ಮಗನಿಗೂ ತಿಳಿವಳಿಕೆ ಹೇಳಿದಳು. ಅತ್ತೆಯ ತಾಯಿಯೂ ಒಂದೆರಡು ಮಾತುಗನ್ನಾಡಿದಳು. ರಾತ್ರಿ ಸುವರ್ಣೆಯು ಪತಿಯನ್ನು ಕ್ಷಮಾ-ಭಿಕ್ಷೆ ಬೇಡಿದಳು “ನನ್ನ ಮಾತುಗಳಿಂದ

ನಿಮ್ಮ ಮನಸ್ಸಿಗೆ ನೋವುಂಟಾಗಿದ್ದರೆ, ದಯವಿಟ್ಟು ನನ್ನನ್ನು ಕ್ಷಮಿಸಿರಿ!" ಎಂದಳು. ಅಮರನಾಥನ ಬಾಯಿಂದ ಮಾತುಗಳೇ ಹೊರಡದಾದುವು. ಮಂಚದ ಒಂದು ಪಕ್ಕದಲ್ಲಿ ಕುಳಿತು, ಹಾಸಿಗೆಗೆ ಹಾಸಿದ್ದ ದುಪ್ಪಟಿಯನ್ನು ಸುಮ್ಮನೆ ಸರಿಮಾಡತೊಡಗಿದನು. ಸುವರ್ಣೆಯು ಎದುರಿಗೇ ನಿಂತಿದ್ದಳು; ಅವಳ ಮುಖದ ಮೇಲೆ ಮ್ಲಾನ ಮಂದಹಾಸವು ತೋರುತ್ತಿತ್ತು. ಅವಳು ಪುನಃ ಕೇಳಿದಳು "ಕ್ಷಮಿಸಲಾರಿರಾ?"

ಅಮರನಾಥನು ತಲೆಯನ್ನು ತಗ್ಗಿಸಿಕೊಂಡೇ ಹೇಳಿದನು "ಕ್ಷಮಾಪಣೆ ಏತಕ್ಕಾಗಿ? ಅಲ್ಲದೆ ಕ್ಷಮಿಸುವ ಅಧಿಕಾರವಾದರೂ ನನಗೆಲ್ಲಿಯದು?"

ಸುವರ್ಣೆಯು ಪತಿಯ ಕೈಗಳನ್ನು ತನ್ನ ಎರಡೂ ಕೈಗಳಿಂದ ಹಿಡಿದುಕೊಂಡು "ಇಂತಹ ಮಾತುಗಳನ್ನಾಡಬೇಡಿ! ನೀವು ನನ್ನ ಸ್ವಾಮಿ, ನೀವೇ ಕೋಪ ಮಾಡಿಕೊಂಡರೆ ನನ್ನ ನಿರ್ವಾಹವಾಗುವುದು ಹೇಗೆ? ನೀವು ಕ್ಷಮಿಸದಿದ್ದರೆ ನಾನು ಹೇಗಿರಲಿ? ಏತಕ್ಕಾಗಿ ನಿಮಗೆ ಕೋಪ, ಹೇಳಿ!" ಎಂದು ಕೇಳಿದಳು.

ಅಮರನಾಥನು ಆರ್ದ್ರನಾಗಿ ನುಡಿದನು "ನನಗೇತಕ್ಕೆ ಕೋಪ?"

"ಕೋಪ ಇಲ್ಲವಷ್ಟೇ?"

"ಇಲ್ಲ!"

ಸುವರ್ಣೆಗೆ ಕಲಹವೆಂದರೆ ಇಷ್ಟವಿಲ್ಲ. ಆದ್ದರಿಂದಲೇ ಅವಳು ಅವನ ಮಾತಿನಲ್ಲಿ ನಂಬಿಕೆಯುಂಟಾಗದಿದ್ದರೂ ಅವನು ಹೇಳಿದ್ದನ್ನು ನಂಬಿದಳು. ಮತ್ತು "ಹಾಗಿದ್ದರೆ ಸರಿ!" ಎಂದಳು.

ನಂತರ ನಿಶ್ಚಿಂತಳಾಗಿ ಹಾಸಿಗೆಯ ಒಂದು ಕಡೆಯಲ್ಲಿ ಮಲಗಿಕೊಂಡಳು.

ಆದರೆ ಅಮರನಾಥನಿಗೆ ಇದರಿಂದ ಬಹಳ ಆಶ್ಚರ್ಯವಾಯಿತು. ಮತ್ತೊಂದು ಕಡೆ ಮುಖಮಾಡಿಕೊಂಡು ಅವನು ಮನಸ್ಸಿನಲ್ಲೇ ತರ್ಕಿಸತೊಡಗಿದನು 'ಸುವರ್ಣೆಯು ನನ್ನ ಮಾತನ್ನು ಹೇಗೆ ನಂಬಿದಳು? ನಾನು ಎರಡು ದಿನಗಳು ಮನೆಗೆ ಬರಲಿಲ್ಲ, ಅವಳನ್ನು ಕಾಣಲಿಲ್ಲ; ಆದರೂ ನನಗೆ ಕೋಪವಿಲ್ಲವೇ?— ಇದು ನಂಬಲರ್ಹವಾದ ಮಾತೇ? ಇಷ್ಟು ಧಾರಿಣ

ಘಟನೆಯು ಇಷ್ಟು ಬೇಗನೆ ಅಳಿಸಿ, ವ್ಯರ್ಥವಾಗಿ ಹೋಯಿತೇ? ' ಹೀಗೇಯೇ ಯೋಚಿಸುತ್ತ ಸುವರ್ಣೆಯ ಕಡೆಗೆ ತಿರುಗಿದನು. ಸುವರ್ಣೆಯು ನಿಜ ವಾಗಿಯೂ ನಿದ್ರೆ ಮಾಡುತ್ತಿರುವುದನ್ನು ಕಂಡು ಅವನು ಒಮ್ಮೆಗೇ ಎದ್ದು ಕುಳಿತನು. ಮತ್ತು ಸುವರ್ಣೆಯನ್ನು ಕುರಿತು ಜೋರಾಗಿ " ಸುವರ್ಣ! ನಿದ್ರೆ ಮಾಡುತ್ತಿರುವೆಯಾ ? ಓ — ಸುವರ್ಣ ! "

ಸುವರ್ಣೆಗೆ ಎಚ್ಚರವಾಯಿತು. " ಕೂಗಿದಿರಾ ? " ಎಂದಳು.

" ಹೌದು ! ನಾಳೆ ನಾನು ಕಲ್ಕತ್ತೆಗೆ ಹೋಗುವೆನು. "

" ಇದುವರೆವಿಗೂ ಈ ವಿಷಯವನ್ನು ಹೇಳಲೇ ಇಲ್ಲ? ಏಕೆ, ಕಾಲೇ ಜಿನ ರಜಾ ಇಷ್ಟು ಬೇಗನೆ ಮುಗಿದುಹೋಯಿತೇ ? ಇನ್ನು ನಾಲ್ಕಾರು ದಿನ ಇರಲಾಗುವುದಿಲ್ಲವೇ? "

" ಇಲ್ಲ; ಇನ್ನು ಇರಲಾಗುವುದಿಲ್ಲ ! "

ಸುವರ್ಣೆಯು ಸ್ವಲ್ಪ ಯೋಚಿಸಿ, ಪುನಃ ಕೇಳಿದಳು " ಹಾಗಿದ್ದರೆ ನನ್ನ ಮೇಲೆ ಕೋಪಮಾಡಿಕೊಂಡು ಹೋಗುತ್ತಿರುವಿರಾ ? "

ಮಾತೇನೋ ನಿಜವಾಗಿತ್ತು; ಅಮರನಾಥನಿಗೂ ಗೊತ್ತಿತ್ತು; ಆದರೆ ಅವನು ಅದನ್ನು ಒಪ್ಪಿಕೊಳ್ಳಲಿಲ್ಲ. ಸಂಕೋಚವು ಅವನ ಪಂಚೆಯ ತುದಿ ಯನ್ನು ಹಿಡಿದೆಳೆದು ಅವನನ್ನು ನಿಲ್ಲಿಸಿಕೊಂಡಿತು.

ತನ್ನ ಕೋಪ ಅಥವಾ ಮೂರ್ಖತನವನ್ನು ಪ್ರಕಟಗೊಳಿಸಿ ಎಲ್ಲಿ ಸುವ ರ್ಣೆಯ ಸನ್ಮಾನಕ್ಕೆ ಹಾನಿ ತರುವೆನೋ ಎಂದು ಅಮರನಾಥನು ಹೆದರಿ ದನು. ಆ ಕುತೂಹಲ ವಿಮುಖ ನಾರಿಯ ನಿಶ್ಚೇಷ್ಟತೆಯು ಅವನನ್ನು ಅಭಿಭೂತವನ್ನಾಗಿಸಿತ್ತು. ತನ್ನ ಸ್ವಾಭಾವಿಕ ಅಧಿಕಾರದಿಂದ ಅವನು ಎಷ್ಟು ಪತೀತ್ವದ ತೇಜಸ್ಸನ್ನು ಇದುವರೆವಿಗೂ ಗ್ರಹಿಸಿದ್ದನೋ, ಅಷ್ಟನ್ನೂ ಸುವ ರ್ಣೆಯು ಈ ನಾಲ್ಕಾರು ತಿಂಗಳುಗಳಲ್ಲಿ ಕಿತ್ತುಕೊಂಡು ಬಿಟ್ಟಿದ್ದಳು. ಹೀಗಿರು ವಲ್ಲಿ ಅವನು ಯಾವ ಆಧಾರದ ಮೇಲೆ ಕೋಪ ಮಾಡುವನು ?

" ಕೋಪ ಮಾಡಿಕೊಂಡು ಎಲ್ಲಿಗೂ ಹೊರಟು ಹೋಗಬೇಡಿ ! ಇದ ರಿಂದ ನನ್ನ ಮನಸಿಗೆ ಬಹಳ ನೋವಾಗುವುದು ! " ಎಂದಳು ಸುವರ್ಣೆ.

ಅಮರನಾಥನು ನಿಜ-ಸುಳ್ಳು ಎಲ್ಲವನ್ನೂ ಸೇರಿಸಿ, ಏನೇನೋ ಹೇಳಿ, ಅಂತೂ ತನಗೆ ಕೋಪ ಬಂದಿಲ್ಲವೆಂದು ತೋರಿಸಿಕೊಂಡನು ಮತ್ತು ಅದನ್ನು ಪ್ರಮಾಣಿಸಿ ತೋರಿಸುವುದಕ್ಕೋಸ್ಕರ ಇನ್ನೆರಡು ದಿನಗಳು ಇದ್ದು ಹೋದನು ಅಷ್ಟಾದರೂ, ಆತ್ತು ಅತ್ತು ವಿಜಯವನ್ನು ಪಡೆಯುವ ಲಜ್ಜಾಜನಕ ದುಃಖವು ಮಾತ್ರ ಅವನ ಮನದಲ್ಲಿ ಮನೆಮಾಡಿಕೊಂಡೇ ಇತ್ತು !

೯

ಒಮ್ಮೆಗೇ ಜೋರಾಗಿ ಮಳೆ ಸುರಿದು ಬಿಟ್ಟರೆ ಒಂದು ರೀತಿಯಿಂದ ಎಷ್ಟೋ ಕ್ಷೇಮ,— ಅದರಿಂದ ಆಕಾಶವು ನಿರ್ಮಲವಾಗುತ್ತದೆ ಆದರೆ ಹನಿಹನಿ ಹಾಕುತ್ತಿದ್ದರೆ, ಅದರಿಂದ ಮೋಡಗಳೂ ದೂರಾಗುವುದಿಲ್ಲ; ಮಳೆಯೂ ನಿಲ್ಲುವುದಿಲ್ಲ— ಅಲ್ಲದೆ ಭೂಮಿಯೆಲ್ಲಾ ಕೊಚ್ಚೆ-ರೊಚ್ಚೆಯಾಗಿ, ನಾಲ್ಕೂ ಕಡೆ ನಿರಾನಂದಮಯ ಭಾಗವು ಹೆಚ್ಚುತ್ತದೆ. ಅಂತೆಯೇ ಅಮರನಾಥನು ಮನೆಯಿಂದ ಕಲ್ಕತ್ತೆಗೆ ಹೊರಡುವಾಗ ಹಚ್ಚಿಕೊಂಡು ಬಂದ ಕೊಚ್ಚೆಯನ್ನು ತೊಳೆದುಕೊಳ್ಳಲು — ಎಷ್ಟು ಹುಡುಕಿದರೂ — ಇಷ್ಟು ದೊಡ್ಡ ವಿರಾಟ್ ನಗರದಲ್ಲಿ ಸಹ ಒಂದು ತೊಟ್ಟು ನೀರು ಸಿಗಲಿಲ್ಲ. ಇಲ್ಲಿ ಅವನ ಪೂರ್ವಪರಿಚಿತ ಸುಖಗಳೆಷ್ಟೋ ಇದ್ದುವು; ಆದರೂ ಅವುಗಳ ಮುಂದೆ ತನ್ನ ಕೊಚ್ಚೆಯ ಕಾಲನ್ನು ತೆಗೆಯಲು ಅವನಿಗೆ ನಾಚಿಕೆ ಎನಿಸುತ್ತಿತ್ತು. ಓದುಬರೆಹ, ಆಟಪಾಠ ಯಾವುದರಲ್ಲೂ ಅವನಿಗೆ ಮನಸಾಗುತ್ತಿರಲಿಲ್ಲ. ಇಲ್ಲಿರಲೂ ಮನಸಾಗುತ್ತಿಲ್ಲ, ಮನೆಗೆ ಹೋಗಲೂ ಮನಸಾಗುತ್ತಿಲ್ಲ. ಅವನ ಹೃದಯದ ಮೇಲೆ ದುಃಸ್ಸಹ ದುಃಖದ ಭಾರವನ್ನು ಹೊರಿಸಲಾಗಿದೆಯೋ, ಮತ್ತು ಆ ಭಾರವನ್ನು ದೂರ ತಳ್ಳುವುದಕ್ಕಾಗಿ ವ್ಯಾಕುಲ ಹೃದಯದ ಎಲುಬುಗಳು ಒಂದಕ್ಕೊಂದು ಹೊಡೆದಾಡುತ್ತಿರುವುವೋ ಎಂಬಂತಿತ್ತು. ಆದರೆ ಎಲ್ಲ ಪ್ರಯತ್ನವೂ ವ್ಯರ್ಥ !

ಇದೇ ರೀತಿಯ ಅಂತರ್ವೇದನೆಯಿಂದ ಅವನು ಒಂದು ದಿನ ಹಾಸಿಗೆಯನ್ನು ಹಿಡಿದನು. ಸಮಾಚಾರ ತಿಳಿಯುತ್ತಲೇ ಮಾತಾ-ಪಿತೃಗಳು ಅಲ್ಲಿಗೆ ಬಂದರು; ಆದರೆ ಸುವರ್ಣೆಯನ್ನು ಸಂಗಡ ಕರೆತರಲಿಲ್ಲ ಅಮರನಾಥನೂ ಅದನ್ನೇ ಅಪೇಕ್ಷಿಸುತ್ತಿದ್ದನೆಂತಲ್ಲ — ಅವನ ಮನಸಿಗೆ ದುಃಖವಾಯಿತು. ಖಾಯಿಲೆಯು ದಿನದಿನಕ್ಕೂ ಹೆಚ್ಚುತ್ತ ಹೋಯಿತು. ಅಂಗತೂ ಅವನಿಗೆ ಸುವರ್ಣೆಯನ್ನು ನೋಡಬೇಕೆಂಬ ಆಸೆಯು ಬಲವಾಯಿತು; ಆದರೆ ಅವನು

ಆ ಮಾತನ್ನು ಬಾಯಿ ಬಿಟ್ಟು ಹೇಳಲಾರದೆ ಹೋದನು. ಮಾತಾ-ಪಿತೃ ಗಳೂ ತಿಳಿದುಕೊಳ್ಳಲಾರದೆ ಹೋದರು. ಕೇವಲ ಚಿಕಿತ್ಸೆ, ಔಷಧಿ-ಪಥ್ಯಗಳು ಮಾತ್ರ ನಡೆಯುತ್ತಿದ್ದುವು. ಕಡೆಗೆ ಅವನು ಎಲ್ಲದರಿಂದಲೂ ಮುಕ್ತಿ ಹೊಂದಿ ದನು, ಒಂದು ದಿನ ಅವನ ದೇಹಾಂತವಾಯಿತು !

ವೈಧವ್ಯ ಪ್ರಾಪ್ತಿಯಿಂದ ಸುವರ್ಣೆಯು ಸ್ತಂಭಿತಳಾದಳು. ಶರೀರ ವೆಲ್ಲಾ ರೋಮಾಂಚವಾಯಿತು. ಮತ್ತು ಈ ವೈಧವ್ಯವು ತನ್ನದೇ ಕಾಮು ನೆಯ ಫಲವೋ ! — ಎಂಬ ಭಯಂಕರ ಭಾವನೆಯು ಅವಳ ಮನದಲ್ಲಿ ಉತ್ಪನ್ನವಾಯಿತು ಅಷ್ಟರಲ್ಲೇ ಹೊರಗಿನಿಂದ ತನ್ನ ತಂದೆಯು ಜೋರಾಗಿ ಅಳುತ್ತಿರುವ ಧ್ವನಿ ಕೇಳಬಂದಿತು. ಇದೇನು ಸ್ವಪ್ನವೋ ? ಅವರು ಯಾವಾಗ ಬಂದರು ? ಸುವರ್ಣೆಯು ಕಿಟಿಕಿಯನ್ನು ತೆರೆದು ನೋಡಲಾಗಿ, ನಿಜವಾಗಿಯೂ ರಾಜನಾರಾಯಣ ಬಾಬುಗಳು ಮಕ್ಕಳಂತೆ ಮಣ್ಣಿನಲ್ಲಿ ಹೊರಳುತ್ತ ಬಿಕ್ಕಿಬಿಕ್ಕಿ ಅಳುತ್ತಿದ್ದರು. ತಂದೆಯು ಅಳುತ್ತಿರುವವುದನ್ನು ನೋಡಿ, ತಾನೂ ನೆಲದ ಮೇಲೆ ಬಿದ್ದು ಅಳತೊಡಗಿದಳು.

ಸಂಜೆಯಾಗುತ್ತ ಬಂದಿತು. ತಂದೆಯು ಸುವರ್ಣೆಯ ಬಳಿಗೆ ಬಂದು ಅವಳನ್ನು ಎರಡು ಕೈಗಳಿಂದಲೂ ಅಪ್ಪಿಕೊಂಡ " ಮಗೂ ! ಸುವರ್ಣ! " ಎಂದನು.

ಸುವರ್ಣೆಯು ಅಳುತ್ತಳುತ್ತ " ಅಪ್ಪಾ ! " ಎಂದಳು.

" ನಿನ್ನ ಮದನಮೋಹನನು ನಿನ್ನನ್ನು ಕರೆದನು, ಮಗೂ! "

" ನಡೆ, ಅಪ್ಪಾ ! ಅಲ್ಲಿಗೇ ಹೋಗೋಣ ! "

" ಅಲ್ಲಿ ನಿನಗೆ ಬೇಕಾದಷ್ಟು ಕೆಲಸವಿದೆ, ಮಗೂ ! "

" ನಡೆ ಅಪ್ಪಾ ! ಮನೆಗೆ ಹೋಗೋಣ ! "

" ನಡೆ ಮಗೂ, ನಡೆ. " ಎನ್ನುತ್ತ ತಂದೆಯು ಪ್ರೀತಿಯಿಂದ ಮಗಳ ಹಣೆಗೆ ಮುದ್ದಿಟ್ಟನು; ಸಂಗಡಲೇ ಹೃದಯದ ದುಃಖವೆಲ್ಲವನ್ನೂ ಒರೆಸಿ ದೂರ ಮಾಡಿದನು; ಮತ್ತು ಮಗಳ ಕೈ ಹಿಡಿದುಕೊಂಡು ಮರುದಿನವೇ ಅಲ್ಲಿಂದ ತನ್ನ ಮನೆಗೆ ಮರಳಿದನು. " ಮಗೂ ! ಅದೋ ನೋಡು, ನಿನ್ನ ಮಂದಿರ ! ಅವನೇ ನಿನ್ನ ಮದನಮೋಹನ ! " ಎಂದು ತೋರಿಸಿದನು.

ನಿರಾಭರಣಗಳಾದ ಸುವರ್ಣೆಯು ವೈಧವ್ಯ ವೇಷದಲ್ಲಿ ಹೊಸದೊಂದು ರೂಪದಿಂದ ಕಾಣಿಸುತ್ತಿದ್ದಳು. ಬಿಳಿಯ ವಸ್ತ್ರ ಮತ್ತು ಒಣ ಕೂದಲುಗಳು ಅವಳ ಸೌಂದರ್ಯವನ್ನು ಮತ್ತಷ್ಟು ಹೆಚ್ಚಿಸಿದ್ದುವೋ ಎಂಬಂತಿತ್ತು. ಅವಳು ತಂದೆಯ ಮಾತಿನಲ್ಲಿ ಬಹಳ ನಂಬಿಕೆಯಿಟ್ಟಳು. ದೇವರ ಆಹ್ವಾನ ದಿಂದಲೇ ತಾನು ಅಲ್ಲಿಗೆ ಹಿಂತಿರುಗಿದೆನೆಂದು ಯೋಚಿಸಿದಳು. ಆದ್ದರಿಂದಲೇ ಮಂದಿರದಲ್ಲಿ ಆ ಪರಿಯ ಸೌರಭವಿರುವುದೆಂದೂ ಮತ್ತು ದೇವರ ಮುಖದ ಮೇಲೆ ಮಂದಹಾಸವು ಸೂಸುತ್ತಿರುವುದೆಂದೂ ತಿಳಿದುಕೊಂಡಳು! ತಾನು ಈ ಪೃಥ್ವಿಯಿಂದ ಒಂದು ಉನ್ನತ ಮಟ್ಟಕ್ಕೇರಿದಂತೆ ಅವಳಿಗೆ ಭಾಸ ವಾಯಿತು.

ಯಾವ ಪತಿಯ ಮೃತ್ಯುವಿನಿಂದ ತಾನು ಈ ಉನ್ನತ ಮಟ್ಟಕ್ಕೇರಿ ದಳೋ, ಆ ಮೃತಪತಿಯನ್ನು ಮನದಲ್ಲೇ ಸಹಸ್ರ ಬಾರಿ ವಂದಿಸಿ, ಅವನಿಗೆ ಅಕ್ಷಯ ಸ್ವರ್ಗವು ಸಿಗಲೆಂದು ಪ್ರಾರ್ಥಿಸಿದಳು.

## ೧೦

ಶಕ್ತಿನಾಥನು ಏಕಾಗ್ರ ಚಿತ್ತದಿಂದ ಪ್ರತಿಮೆ ಮಾಡುತ್ತಿದ್ದ. ಪೂಜೆ ಮಾಡುವುದಕ್ಕಿಂತ ಪ್ರತಿಮೆ ಮಾಡುವುದೆಂದರೆ ಅವನಿಗೆ ಬಹಳ ಇಷ್ಟ. ರೂಪು ಹೇಗಿರಬೇಕು, ಮೂಗು-ಕಣ್ಣುಗಳು ಹೇಗಿರಬೇಕು, ಯಾವ ಬಣ್ಣ ಹಾಕಿದರೆ ಪ್ರತಿಮೆಯು ಅಂದವಾಗುವುದು — ಇವೇ ಅವನ ಆಲೋಚ್ಯ ವಿಷಯಗಳಾ ಗಿದ್ದುವು. ಯಾವ ಪದಾರ್ಥದಿಂದ ಪೂಜೆಮಾಡಬೇಕು, ಯಾವ ಮಂತ್ರ ವನ್ನು ಜಪಿಸಬೇಕು, — ಮುಂತಾದ ಸಣ್ಣ ವಿಷಯಗಳ ಕಡೆಗೆ ಅವನ ಗಮ ನವೇ ಇರಲಿಲ್ಲ. ದೇವರ ಸಂಬಂಧದಲ್ಲಿ ಅವನು ತನಗೆ ತಾನೇ ಪ್ರಮೋಶನ್ ಕೊಟ್ಟುಕೊಂಡಿದ್ದನು ಮತ್ತು ಸೇವಕನ ಸ್ಥಾನದಿಂದ ಪಿತನ ಸ್ಥಾನಕ್ಕೇರಿ ದ್ದನು. ಒಂದು ದಿನ ಅವನ ತಂದೆಯು ಅವನನ್ನು ಕುರಿತು "ಶಕ್ತಿನಾಥ! ಈ ದಿನ ನನಗೆ ಜ್ವರ ಜಾಸ್ತಿಯಾಗಿದೆ; ಜಮೀನದಾರರ ಮನೆಗೆ ನೀನೇ ಹೋಗಿ ಪೂಜೆಮಾಡಿ ಬಾ!" ಎಂದನು.

"ಪ್ರತಿಮೆ ಮಾಡುತ್ತಿರುವೇನು, ಸ್ವಲ್ಪ ತಡೆ!" ಎಂದ ಶಕ್ತಿನಾಥ.

ವೃದ್ಧ ಅಸಮರ್ಥ ಪಿತನು ಕೋಪಗೊಂಡು ನುಡಿದನು "ಹುಡುಗಾಟಿಕೆ ಹಾಗಿರಲಿ, ಮಗೂ! ಮೊದಲು ಹೋಗಿ ಕೆಲಸವನ್ನು ಮುಗಿಸಿಕೊಂಡು ಬಾ!"

ಪೂಜೆಯ ಮಂತ್ರಗಳನ್ನು ಹೇಳುವುದೆಂದರೆ ಅವನಿಗೆ ಸ್ವಲ್ಪವೂ ಇಷ್ಟ ವಿರಲಿಲ್ಲ; ಆದರೂ ಎದ್ದು ಹೋಗಲೇಬೇಕಾಯಿತು ತಂದೆಯ ಆಜ್ಞೆಯಂತೆ ಸ್ನಾನ ಮಾಡಿ, ಅಂಗವಸ್ತ್ರವನ್ನು ಮೇಲೆ ಹೊದೆದು, ದೇವಮಂದಿರದಲ್ಲಿ ಬಂದು ನಿಂತನು. ಇದಕ್ಕೆ ಮುಂಚಿತವಾಗಿಯೂ ಎಷ್ಟೋ ದಿನಗಳು ಅವನು ಅಲ್ಲಿಗೆ ಪೂಜೆ ಮಾಡಲು ಬಂದಿದ್ದನು. ಆದರೆ ಇಂತಹ ಆಶ್ಚರ್ಯವನ್ನು ಅವನು ಹಿಂದೆಂದೂ ಕಂಡಿರಲಿಲ್ಲ. ಈ ಪರಿಯ ಪುಷ್ಪಸುಗಂಧಿ, ಧೂಪ-ಸೌರಭಗಳ ಆಡಂಬರ, ಭೋಜ್ಯ ಮತ್ತು ನೈವೇದ್ಯಗಳ ಬಾಹುಳ್ಯ ! ಇದ ನೆಲ್ಲಾ ತೆಗೆದುಕೊಂಡು ಏನು ಮಾಡಬೇಕು, ಯಾವುದರಿಂದ ಯಾವ ರೀತಿ ಪೂಜೆ ಮಾಡಬೇಕು ? ಎಂಬಿವೇ ವಿಷಯಗಳು ಅವನನ್ನು ಬಾಧಿಸತೊಡಗಿ ದುವು ಎಲ್ಲದಕ್ಕೂ ಮಿಗಿಲಾದ ಆಶ್ಚರ್ಯವು ಅವನಿಗುಂಟಾದುದು ಸುವ-ರ್ಣೆಯನ್ನು ನೋಡಿದಾಗ ! ಇವಳಾರು ? ಎಲ್ಲಿಂದ ಬಂದಳು ? ಇಷ್ಟು ದಿನ ಗಳು ಎಲ್ಲಿದ್ದಳು ?

“ ನೀವು ಭಟ್ಟಾಚಾರ್ಯರ ಮಗನಲ್ಲವೇ ? ” ಎಂದಳು ಸುವರ್ಣೆ.

“ ಹೌದು ! ” ಎಂದ ಶಕ್ತಿನಾಥ

“ ಹಾಗಿದ್ದರೆ ಕೈ-ಕಾಲು ತೊಳೆದುಕೊಂಡು ಪೂಜೆಗೆ ಕುಳಿತುಕೊಳ್ಳಿ!”

ಪೂಜೆ ಮಾಡುವವುದಕ್ಕೆಂದು ಕುಳಿತಾಗ ಶಕ್ತಿನಾಥನಿಗೆ ಮೊದಲಿನಿಂದ ಎಲ್ಲವೂ ಮರೆತು ಹೋಯಿತು. ಒಂದು ಮಂತ್ರವಾದರೂ ಜ್ಞಾಪಕ ಬರಲಿಲ್ಲ. ಪೂಜೆಯಲ್ಲಿ ಅವನ ಮನಸ್ಸೇ ಇರಲಿಲ್ಲ; ಅಲ್ಲದೆ ನಂಬಿಕೆಯೂ ಇರಲಿಲ್ಲ, ಇವಳಾರು ? ಇದೆಲ್ಲಿಯ ರೂಪರಾಣಿ ? ಇವಳೇಕೆ ಇಲ್ಲಿ ಕುಳಿತಿರುವಳು ? ಇವೇ ಮುಂತಾದ ಯೋಚನೆಗಳು ಅವನ ಮನದಲ್ಲಿ ಬರತೊಡಗಿದುವು. ಪೂಜೆಯ ರೀತಿಯೇ ಅವನಿಗೆ ಮರೆತು ಹೋಯಿತು. ಒಮ್ಮೆ ಗಂಟೆಯನ್ನು ಬಾರಿಸುವುದು, ಒಮ್ಮೆ ಪುಷ್ಪವನ್ನು ಹಾಕುವುದು, ಒಮ್ಮೆ ನೈವೇದ್ಯದ ಮೇಲೆ ನೀರು ಚಿಮುಕಿಸುವುದು—ಹೀಗೆಲ್ಲಾ ಮಾಡಿ ಪೂಜೆಯ ನಟನೆಯನ್ನು ರಚಿಸು ತ್ತಿದ್ದ ಈ ಅಜ್ಞ ಪುರೋಹಿತನನ್ನು ನೋಡಿ ಸುವರ್ಣೆಯು ವಿಜ್ಞಪರೀಕ್ಷಕ ನಂತೆ ಎಲ್ಲವನ್ನೂ ತಿಳಿದುಕೊಂಡಳು. ಎಂದಿನಿಂದಲೂ ಪೂಜೆಯನ್ನು ನೋಡಿ ನೋಡಿ ಸುವರ್ಣೆಗೆ ಈ ವಿಷಯಗಳೆಲ್ಲ ಚನ್ನಾಗಿ ತಿಳಿದು ಹೋಗಿತ್ತು; ಶಕ್ತಿನಾಥನು ಅವಳಿಗೆ ಮೋಸ ಮಾಡುವುದೆಂದರೆ ಹೇಗೆ ಸಾಧ್ಯ ? ಪೂಜೆಯು

ಮುಗಿದ ಕೂಡಲೇ ಸುವರ್ಣೆಯು ಕಠೋರ ಸ್ವರದಿಂದ ನುಡಿದಳು “ ನೀವು ಬ್ರಾಹ್ಮಣಪುತ್ರರಾಗಿ, ಪೂಜೆ ಮಾಡುವುದು ಗೊತ್ತಿಲ್ಲವೇ ? ”

“ ಗೊತ್ತಿದೆ.” ಎಂದ ಶಕ್ತಿನಾಥ.

“ ಏನು ಗೊತ್ತಿದೆ ? ಮಣ್ಣು ! ”

ಶಕ್ತಿನಾಥನು ವಿಹ್ವಲನಂತೆ ಅವಳ ಮುಖದ ಕಡೆ ನೋಡಿದನು, ಮತ್ತು ಹೊರಡಲು ಸಿದ್ಧನಾದನು. ಸುವರ್ಣೆಯು ಅವನನ್ನು ತಡೆದು ನಿಲ್ಲಿಸಿ “ ಈ ಸಾಮಾನುಗಳನ್ನೆಲ್ಲ ಕಟ್ಟಿಕೊಂಡು ಹೋಗಿ ! ಆದರೆ ನಾಳೆಯಿಂದ ನೀವು ಬರಬೇಡಿ ! ನಿಮ್ಮ ತಂದೆಯವರಿಗೆ ಗುಣವಾದರೆ ಅವರೇ ಬರುವರು ! ” ಎಂದಳು.

ಸುವರ್ಣೆಯು ತಾನೇ ಅವನ ಅಂಗವಸ್ತ್ರದಲ್ಲಿ ಎಲ್ಲ ಸಾಮಾನನ್ನೂ ಕಟ್ಟಿಕೊಟ್ಟು, ಅವನನ್ನು ಕಳುಹಿಸಿದಳು. ಮಂದಿರದ ಹೊರಗಡೆ ಬಂದು ಶಕ್ತಿನಾಥನು ಅನೇಕಬಾರಿ ಕಂಪಿಸಿದನು.

ಇತ್ತ ಸುವರ್ಣೆಯು ಪುನಃ ಹೊಸದಾಗಿ ಪೂಜೆಯ ಆಯೋಜನೆ ಮಾಡಿ, ಬೇರೆ ಬ್ರಾಹ್ಮಣನನ್ನು ಕರೆಸಿ ಪೂಜೆಯನ್ನು ಪೂರ್ತಿ ಮಾಡಿಸಿದಳು.

## ೧೧

ಒಂದು ತಿಂಗಳು ಕಳೆಯಿತು. ಒಂದು ದಿನ ಆಚಾರ್ಯ ಯದುನಾಥರು ಜಮೀನದಾರ ರಾಜನಾರಾಯಣ ಬಾಬುಗಳನ್ನು ಕುರಿತು ಹೇಳಿದರು “ ತಮಗೆಲ್ಲವೂ ತಿಳಿದ ವಿಷಯವೇ ಆಗಿದೆ. ಮಂದಿರದ ಮಹಾಪೂಜೆಯು ಮಧುಭಟ್ಟಾಚಾರ್ಯರ ಪುತ್ರರಿಂದ ಖಂಡಿತವಾಗಿಯೂ ಆಗುವುದಿಲ್ಲ ! ” ರಾಜನಾರಾಯಣ ಬಾಬುಗಳು ಅವರ ಮಾತನ್ನು ಅನುಮೋದಿಸುತ್ತ ಹೇಳಿದರು “ ಕೆಲವು ದಿನಗಳ ಹಿಂದೆ ಸುವರ್ಣೆಯೂ ಇದೇ ಮಾತನ್ನು ಹೇಳಿದ್ದಳು.”

ಆಚಾರ್ಯರು ತಮ್ಮ ಮುಖಭಾವವನ್ನು ಮತ್ತಷ್ಟು ಗಂಭೀರಮಾಡಿಕೊಂಡು ನುಡಿದರು “ ಹೇಳಿರಲೇ ಬೇಕು ! ಅವರು ಸಾಕ್ಷಾತ್ ಲಕ್ಷ್ಮೀಸ್ವರೂಪರು; ಅವರ ಕಣ್ಣಿಗೆ ಅಗೋಚರವಾದುದು ಯಾವುದು ? ”

ಜಮೀನದಾರ ರಾಜನಾರಾಯಣ ಬಾಬುಗಳಿಗೂ ತಮ್ಮ ಮಗಳ ವಿಷಯವಾಗಿ ಇದೇ ಭಾವನೆಯಿತ್ತು. ಆಚಾರ್ಯರು ಪುನಃ ಹೇಳತೊಡಗಿ

ದರು "ಪೂಜೆಯನ್ನು ನಾನೇ ಮಾಡಲಿ ಅಥವಾ ಇತರರ್ಯಾರೇ ಮಾಡಲಿ, ಪೂಜೆಗೆ ಯೋಗ್ಯರಾಗಿರಬೇಕು! ಮಧುಭಟ್ಟಾಚಾರ್ಯರು ಜೀವಂತರಾಗಿ ರುವವರೆಗೂ ಅವರೇ ಪೂಜೆ ಮಾಡಿದರು; ಈಗ ಅವರ ಮಗನಾದ ಶಕ್ತಿನಾಥನೇ ಪೌರೋಹಿತ್ಯ ಮಾಡುವುದು ಉಚಿತ; ಆದರೆ ಅವನು ಮನುಷ್ಯ ನಲ್ಲ! ಅವನು ಕೇವಲ ಪ್ರತಿಮೆಗಳನ್ನು ಮಾಡುವುದು, ಅವುಗಳನ್ನು ಚಿತ್ರಿಸು ವುದು, ಆಟದ ಸಾಮಾನುಗಳನ್ನು ಮಾಡುವುದು— ಇಷ್ಟು ಮಾತ್ರ ಬಲ್ಲನು; ಪೂಜೆ ಮಾಡುವುದನ್ನು ಅರಿಯನು!" ಎಂದರು.

ರಾಜನಾರಾಯಣ ಬಾಬುಗಳು ಅನುಮತಿಕೊಡುತ್ತ "ಪೂಜೆಯನ್ನು ನೀವೇ ಮಾಡಿರಿ! ಆದರೆ ಒಮ್ಮೆ ಸುವರ್ಣೆಯನ್ನು ಕೇಳಿ ನೋಡುವೆನು!" ಎಂದರು.

ತಂದೆಯ ಬಾಯಿಂದ ಈ ಮಾತನ್ನು ಕೇಳಿ, ಸುವರ್ಣೆಯು ತಲೆಯಲ್ಲಾ ಡಿಸುತ್ತ ಹೇಳಿದಳು "ಹಾಗೆಲ್ಲಾದರೂ ಮಾಡುದುಂಟೇ? ಬ್ರಾಹ್ಮಣ-ಕುಮಾರನು ನಿರಾಶ್ರಯನಾಗಿರುವನು; ಅವನನ್ನು ಎಲ್ಲಿಗೆ ದೂಡಿ ಬಿಡುವುದು? ಅವನಿಗೆ ಬಂದಂತೆ ಪೂಜೆ ಮಾಡಲಿ! ಪರಮಾತ್ಮನು ಅದರಿಂದಲೇ ಸಂತುಷ್ಟ ನಾಗುವನು!"

ಪುತ್ರಿಯ ಮಾತನ್ನು ಕೇಳಿ ಪಿತನಿಗೆ ಚೈನ್ಯವುಂಟಾಯಿತು. ಅವ ನೆಂದನು "ನಾನು ಇಷ್ಟೊಂದು ಯೋಚನೆ ಮಾಡಲಿಲ್ಲ, ಮಗೂ! ನಿನ್ನದೇ ಮಂದಿರ, ನಿನ್ನದೇ ಪೂಜೆ; ಎಲ್ಲವೂ ನಿನ್ನ ಇಚ್ಛೆಯಂತೆ ನಡೆಯಲಿ ಮಗೂ! ಪೌರೋತ್ಯವನ್ನು ನೀನು ಯಾರಿಗೆ ಬೇಕಾದರೂ ಕೊಡು!"

ಇಷ್ಟು ಹೇಳಿ ತಂದೆಯು ಅಲ್ಲಿಂದ ಹೊರಟು ಬಂದನು ಸುವರ್ಣೆಯು ಶಕ್ತಿನಾಥನಿಗೆ ಹೇಳಿಕಳುಹಿಸಿ, ಅವನಿಗೇ ಪೂಜೆಯ ಕೆಲಸವನ್ನು ವಹಿಸಿದಳು. ಹಿಂದೊಮ್ಮೆ ಅವಳು ಗದರಿಸಿದಂದಿನಿಂದ ಇದುವರೆಗೂ ಅವನು ಅಲ್ಲಿಗೆ ಬಂದಿರಲಿಲ್ಲ ಈ ಮಧ್ಯೆ ಅವನ ತಂದೆಯೂ ತೀರಿಕೊಂಡರು; ಅಲ್ಲದೆ ತಾನೂ ಅಸ್ವಸ್ಥನಾಗಿದ್ದನು. ಅವನ ನಿಸ್ತೇಜ-ಶುಷ್ಕ ಮುಖದ ಮೇಲಿನ ಶೋಕ ಚಿಹ್ನೆಯನ್ನು ಕಂಡು ಸುವರ್ಣೆಯ ಹೃದಯ ಕರಗಿ ನೀರಾಯಿತು. "ನೀವೇ ಪೂಜೆ ಮಾಡಿ,— ನಿಮಗೆ ಬಂದಂತೆಯೇ ಪೂಜೆ ಮಾಡಿರಿ; ಅದ ರಿಂದಲೇ ಭಗವಂತನು ತೃಪ್ತಿಹೊಂದುವನು!" ಎಂದಳು.

ಈ ಪರಿಯ ಸ್ನೇಹಸ್ವರವನ್ನು ಕೇಳಿ ಅವನಿಗೆ ಸಾಹಸವುಂಟಾಯಿತು. ಸಾವಧಾನ ಚಿತ್ತನಾಗಿ ಕುಳಿತು, ಮನಃಪೂರ್ವಕವಾಗಿ ಪೂಜೆ ಮಾಡತೊಡ ಗಿದನು. ಪೂಜೆಯು ಸಮಾಪ್ತವಾದನಂತರ ಸುವರ್ಣೆಯು ಅವನಿಗೆ ಬೇಕಾ ದನ್ನು ಸಾಮಾನುಗಳನ್ನೆಲ್ಲಾ ಕಟ್ಟಿಟ್ಟು ಕೇಳಿದಳು "ಇಂದು ಪೂಜೆಯು ಬಹಳ ಚೆನ್ನಾಗಿ ನೆರವೇರಿತು. ಮನೆಯಲ್ಲಿ ನೀವೇ ಅಡಿಗೆ ಮಾಡಿಕೊಂಡು ಊಟ ಮಾಡುವಿರಾ?"

"ಒಂದೊಂದು ದಿನ ಅಡಿಗೆ ಮಾಡುವೆನು, ಒಂದೊಂದು ದಿನ ಎಂದು ಜ್ವರನೇರಿ ಬರುವುದೋ ಅಂದು ಮಾಡುವುದಿಲ್ಲ; ಮಾಡಲಾಗುವುದಿಲ್ಲ!"

"ಮನೆಯಲ್ಲಿ ನಿಮಗೆ ಮತ್ತಾರೂ ಇಲ್ಲವೇ?"

"ಇಲ್ಲ!"

ಶಕ್ತಿನಾಥನು ಮನೆಗೆ ಹೋದ ಬಳಿಕ, ಸುವರ್ಣೆಯು ಅವನಿಗಾಗಿ "ಅಯ್ಯೋ ಪಾಪ!" ಎಂದು ಬಹಳವಾಗಿ ಮರುಗಿದಳು. ನಂತರ ದೇವರ ಮುಂದೆ ಹೋಗಿ ಕೈಮುಗಿದು ನಿಂತು ಅವನಿಗಾಗಿ ಪ್ರಾರ್ಥಿಸಿದಳು "ಭಗ ವಂತ! ಇವರ ಪೂಜೆಯಿಂದ ನೀನು ಸಂತುಷ್ಟನಾಗು ಇನ್ನೂ ತಿಳಿಯು ದವರು; ಇವರ ದೋಷಅಪರಾಧಗಳನ್ನು ಗಣಿಸಬೇಡ! ದೇವಾ!"

ಅಂದಿನಿಂದ ಸುವರ್ಣೆಯು ಪ್ರತಿದಿನವೂ ದಾಸಿಯ ಮೂಲಕ ಅವನನ್ನು ವಿಚಾರಿಸಿಕೊಳ್ಳುತ್ತಿದ್ದಳು— ಅವನೇನು ತಿನ್ನುವನು, ಏನು ಮಾಡುವನು, ಅವನಿಗೇನು ಬೇಕಾಗಿದೆ ಮುಂತಾಗಿ ಎಲ್ಲವನ್ನೂ ತಿಳಿದುಕೊಳ್ಳುತ್ತಿದ್ದಳು ಆ ನಿರಾಶ್ರಯ ಬ್ರಾಹ್ಮಣ ಕುಮಾರನಿಗೆ ಅಜ್ಞಾತರೂಪದಿಂದ ಅವಳು ಆಶ್ರಯವಿತ್ತಳು ಮತ್ತು ಅವನ ಎಲ್ಲಾ ಜವಾಬ್ದಾರಿಯನ್ನೂ ತಾನೇ ವಹಿಸಿ ಕೊಂಡಳು. ಅಂದಿನಿಂದಲೇ ಈ ಉಭಯರು ಕಿಶೋರ-ಕಿಶೋರಿಯರು ತಮ್ಮ ಭಕ್ತಿ, ಸ್ನೇಹ, ಭ್ರಾಂತಿ, ಅಪರಾಧಗಳೆಲ್ಲವನ್ನೂ ಒಂದಾಗಿಸಿ, ಈ ಮಂದಿರದ ಆಶ್ರಯವನ್ನು ಪಡೆದು, ಜೀವನದ ಬೇರೆ ಎಲ್ಲ ಕಾರ್ಯಗಳನ್ನೂ ತಮ್ಮಿಂದ ದೂರ ಮಾಡಿದರು. ಶಕ್ತಿನಾಥನು ಪೂಜೆ ಮಾಡುವನು, ಸುವರ್ಣೆಯು ಈ ರೀತಿ ಮಾಡೆಂದು ಹೇಳುವಳು. ಶಕ್ತಿನಾಥನು ಮಂತ್ರಗಳನ್ನು ಹೇಳುವನು, ಸುವರ್ಣೆಯು ಮನದಲ್ಲೇ ಅದರ ಅರ್ಥವನ್ನು ದೇವರಿಗೆ ತಿಳಿಸಿ ಹೇಳುವಳು. ಶಕ್ತಿನಾಥನು ದೇವರನ್ನು ಸುಗಂಧ-ಪುಷ್ಪಗಳಿಂದ ಅಲಂಕರಿಸುವನು; ಮತ್ತು

ಸುವರ್ಣೆಯು ಅವನಿಗೆ ಅಲಂಕರಿಸುವ ರೀತಿಯನ್ನು ತೋರಿಕೊಡುವಳು. ಒಮ್ಮೊಮ್ಮೆ "ಸಿಂಹಾಸನವನ್ನು ಇಂದು ಬೇರೆ ರೀತಿ ಅಲಂಕರಿಸೋಣ! ಬಹಳ ಚನ್ನಾಗಿರುತ್ತದೆ" ಎನ್ನುವಳು. ಈ ರೀತಿಯಾಗ ಈ ಬೃಹನ್ಮಂದಿರದ ಬೃಹತ್ ಕಾರ್ಯಗಳು ನಡೆಯುತೊಡಗಿದುವು. ಇದನ್ನೆಲ್ಲಾ ನೋಡಿ, ಆಚಾರ್ಯರು "ಎಲ್ಲವೂ ಹುಡುಗಾಟಿಕೆಯಾಗುತ್ತ ಬಂತು! ಎಂದರು

"ಅದೇನೇ ಆಗಲಿ! ಅಂತೂ ಹುಡುಗಿಯು ತನ್ನ ಅವಸ್ಥೆಯನ್ನು ಮರೆತಿದ್ದರೆ ಸಾಕು!" ಎಂದರು ರಾಜನಾರಾಯಣ ಬಾಬುಗಳು.

೧೨

ನಾಟಕ ಶಾಲೆಯ ರಂಗಭೂಮಿಯ ಮೇಲೆ ಒಮ್ಮೆ ಕಾಣುವ ಬೆಟ್ಟ-ಗುಡ್ಡ ಮತ್ತು ಮಳೆ-ಬಿರುಗಾಳಿಗಳ ದೃಶ್ಯವು ಇದ್ದಕ್ಕಿದ್ದಂತೆ ಮಾಯವಾಗಿ ಅದೇ ಸ್ಥಳದಲ್ಲಿ ಒಂದು ವಿಶಾಲ ರಾಜಪ್ರಾಸಾದವು ಕಾಣಿಸಿಕೊಳ್ಳುವಂತೆಯೂ, ಮಾನವನ ಜೀವನದಲ್ಲಿ ದುಃಖದೈನ್ಯದ ಚಿಹ್ನೆಗಳು ಸಹ ದೂರವಾಗಿ ಸುಖಸಂಪತ್ತುಗಳು ತಲೆದೋರುವಂತೆಯೂ, ಶಕ್ತಿನಾಥನ ಜೀವನದಲ್ಲಿ ಇದ್ದಕ್ಕಿದ್ದಂತೆ ಮಾರ್ಪಾಟಾಯಿತು. ಮೊದಮೊದಲು ಅವನಿಗೆ ಇದೆಲ್ಲವೂ ನಿಜವೋ ಅಥವಾ ತಾನು ನಿದ್ರೆಯಲ್ಲಿ ನೋಡುತ್ತಿರುವ ಸುಖಸ್ವಪ್ನವೋ, ಅಥವಾ ನಿದ್ರೆಯಲ್ಲಿ ದುಃಸ್ವಪ್ನವನ್ನು ಕಾಣುತ್ತಿದ್ದು ಎಚ್ಚೆತ್ತಾಗ ಕಾಣುತ್ತಿರುವ ನಿಜವಾದ ಸುಖವೋ ಎಂದು ಅವನಿಗೆ ಭ್ರಾಂತಿಯಾಯಿತು ಆದರೂ, ಒಮ್ಮೊಮ್ಮೆ ತನ್ನ ಮಣ್ಣಿನ ಆಟದ ಸಾಮಾನುಗಳನ್ನು ನೋಡಿದಾಗ ಅವನಿಗೆ ತನ್ನ ಹಿಂದಿನ ಸ್ವತಂತ್ರ ಜೀವನದ ನೆನಪಾಗುತ್ತಿತ್ತು, ಮತ್ತು ಈ ದಾಯಿತ್ವಹೀನ ದೈನಸೇವೆಯು ಸ್ವರ್ಣಸಂಕೋಲೆಯಂತೆ ತನ್ನ ಸಂಪೂರ್ಣ ಶರೀರವನ್ನೂ ಬಂಧಿಸುವಂತೆ ಭಾಸವಾಯಿತು. ಅವನು ತನ್ನ ಮೃತಪಿತನನ್ನೂ, ಆಗಿನ ತನ್ನ ಸ್ವಾತಂತ್ರ್ಯವನ್ನೂ ಪುನಃಪುನಃ ಜ್ಞಾಪಕ ಮಾಡಿಕೊಂಡನು. ತನ್ನ ಶರೀರವನ್ನೇ ಮಾರಿಕೊಂಡಿರುವಂತೆಯೂ, ಸುವರ್ಣೆಯು ಅದನ್ನು ಕೊಂಡುಕೊಂಡಿರುವಂತೆಯೂ ಅವನಿಗೆನಿಸಿತು. ಈ ರೀತಿ, ಬರಬರುತ್ತ ಸುವರ್ಣೆಯ ಸ್ನೇಹವು ಅವನನ್ನು ಮೋಡದಂತೆ ಆವರಿಸಿಕೊಂಡಿತು

ಅಕಸ್ಮಾತ್ತಾಗಿ ಒಂದು ದಿನ ಶಕ್ತಿನಾಥನ ಸೋದರ ಮಾವನು ಅವನ ಮನೆಗೆ ಬಂದನು. ಅವನು ತನ್ನ ತಂಗಿಯ ವಿವಾಹಕ್ಕೋಸ್ಕರ ಅಲ್ಲಿಗೆ

ಬಂದಿದ್ದನು. ಅವನಿರುವುದು ಕಲ್ಕತ್ತೆಯಲ್ಲಿ. ತನ್ನ ಸುಖದ ದಿನಗಳಲ್ಲಿ ತಂಗಿಯ ಮಗನ ನೆನಪಾಯಿತು. ಕಲ್ಕತ್ತೆಗೆ ಬರಬೇಕೆಂದು ಶಕ್ತಿನಾಥನನ್ನು ಬಲಾತ್ಕಾರ ಪಡಿಸಿದನು. ಶಕ್ತಿನಾಥನಿಗೂ ಕಲ್ಕತ್ತೆಗೆ ಹೋಗುವುದು ಬಹಳ ಇಷ್ಟವೆನಿಸಿತು. ರಾತ್ರಿಯೆಲ್ಲಾ ಅವನು ಕಲ್ಕತ್ತೆಯ ಸುಖಜೀವನ, ಸೌಂದರ್ಯಸಮೃದ್ಧಿ ಮುಂತಾದ ವಿಷಯಗಳನ್ನು ಕೇಳಿ ತಿಳಿದುಕೊಂಡನು; ಮತ್ತು ಅಚ್ಚರಿಯಿಂದ ಮುಗ್ಧನಾದನು. ಮರುದಿನ ಅವನಿಗೆ ಮಂದಿರಕ್ಕೆ ಹೋಗಲು ಮನಸ್ಸಾಗಲಿಲ್ಲ. ಬೆಳಗಾದುದನ್ನು ಕಂಡು ಸುವರ್ಣೆಯು ಅವನನ್ನು ಕರೆಯಕಳುಹಿದಳು. ಶಕ್ತಿನಾಥನು ಮನಸ್ಸಿಲ್ಲದ ಮನಸ್ಸಿನಿಂದ ಹೋದನು, ಮತ್ತು " ಈ ದಿನ ನಾನು ಕಲ್ಕತ್ತೆಗೆ ಹೋಗುವೆನು ! ಮಾವನು ಬರಹೇಳಿರುವನು ! " ಎಂದು ನುಡಿದು, ಸಂಕೋಚದಿಂದ ಒತ್ತಟ್ಟಿಗೆ ನಿಂತುಕೊಂಡನು. ಸುವರ್ಣೆಯು ತುಸುಹೊತ್ತು ಮೌನದಿಂದಿದ್ದು, ನಂತರ ಕೇಳಿದಳು " ಕಲ್ಕತ್ತೆಯಿಂದ ಯಾವಾಗ ಹಿಂತಿರುಗುವಿರಿ ? "

ಶಕ್ತಿನಾಥನು ಅಂಜುತ್ತ ನುಡಿದನು " ಮಾವನು ಕಳುಹಿಸಿಕೊಟ್ಟ ಕೂಡಲೇ ಬರುವೆನು ! "

ಸುವರ್ಣೆಯು ಮತ್ತೇನನ್ನೂ ಕೇಳಲಿಲ್ಲ. ಪುನಃ ಯದುನಾಥಚಾರ್ಯರೇ ಬಂದು ಪೂಜೆ ಮಾಡತೊಡಗಿದನು- ಸುವರ್ಣೆಯು ಎಂದಿನಂತೆ ಪೂಜೆಯನ್ನು ನೋಡತೊಡಗಿದಳು ಆದರೆ ಏನೊಂದು ಮಾತನ್ನೂ ಆಡಲು ಅವಳಿಗೆ ಇಷ್ಟವಾಗಲಿಲ್ಲ !

ಕಲ್ಕತ್ತೆಗೆ ಬಂದನಂತರ ಶಕ್ತಿನಾಥನು ವಿವಿಧ ವೈಚಿತ್ರ್ಯ ಮತ್ತು ಆನಂದಗಳಲ್ಲಿ ಕೆಲದಿನಗಳನ್ನು ಕಳೆದನು. ಆದರೆ ಸ್ವಲ್ಪ ದಿನಗಳ ನಂತರವೆ ಅವನ ಮನಸ್ಸು ಮನೆಗೆ ಹೋಗಲು ತಡಪಡಿಸತೊಡಗಿತು ಸೋಮಾರಿತನದ ದೀರ್ಘವಾದ ದಿನಗಳನ್ನು ಕಳೆಯುವುದು ಅವನಿಗೆ ಅಸಾಧ್ಯವಾಯಿತು. ಸುವರ್ಣೆಯು ತನ್ನನ್ನು ಕರೆಯುತ್ತಿರುವಂತೆಯೂ ಮತ್ತು ತಾನು ಉತ್ತರ ಕೊಡದಿದ್ದುದಕ್ಕಾಗಿ ಕೋಪಗೊಂಡಂತೆಯೂ ಅವನು ರಾತ್ರಿಯೆಲ್ಲಾ ಕನಸು ಕಾಣತೊಡಗಿದನು. ಕೊನೆಗೆ ಒಂದು ದಿನ ಮಾವನನ್ನು ಕುರಿತು "ಮಾವ ! ನಾನು ಮನೆಗೆ ಹೋಗುವೆನು. " ಎಂದನು.

ಮಾವನು ಬೇಡವೆಂದನು ಮತ್ತು "ಆ ಹಳ್ಳಿಯಲ್ಲಿ ಹೋಗಿ ಏನು ಮಾಡುವೆ? ಇಲ್ಲೇ ಇದ್ದುಕೊಂಡು ಓದು. ನಂತರ ಯಾವುದಾದರೂ ಉದ್ಯೋಗಕ್ಕೆ ಸೇರಿಸುವೆನು." ಎಂದನು.

ಶಕ್ತಿನಾಥನು ತಲೆಯಲ್ಲಾಡಿಸಿದನು. "ಹಾಗಿದ್ದರೆ ಹೋಗು" ಎಂದನು ಮಾವ.

ಸೋದರತ್ತೆಯು ಅವನನ್ನು ಕರೆದು "ಶಕ್ತಿನಾಥ! ಅದೇಕೆ, ನಾಳೆಯೇ ಊರಿಗೆ ಹೊರಟು ಬಿಡುವೆಯಾ?" ಎಂದು ಕೇಳಿದಳು.

"ಹೌದು, ಹೋಗುವೆನು." ಎಂದ ಶಕ್ತಿನಾಥ.

"ಸುವರ್ಣೆಗಾಗಿ ಮನಸ್ಸು ತಡಪಡಿಸುತ್ತಿದೆಯಲ್ಲವೇ?"

"ಹೌದು!"

"ಅವಳು ನಿನಗೆ ಬಹಳ ಪ್ರೀತಿಸತ್ಕಾರಗಳನ್ನು ಮಾಡುವಳಲ್ಲವೇ?"

ಶಕ್ತಿನಾಥನು ತಲೆ ತಗ್ಗಿಸಿಕೊಂಡೇ ನುಡಿದ "ಹೌದು! ಬಹಳವಾಗಿ ಪ್ರೀತಿಸತ್ಕಾರ ಮಾಡುವಳು!" ಎಂದ.

ಸೋದರತ್ತೆಯು ಮನದಲ್ಲೇ ನಕ್ಕಳು. ಸುವರ್ಣೆಯ ವಿಷಯವನ್ನು ಅವಳು ಮೊದಲೇ ಕೇಳಿದ್ದಳು; ಶಕ್ತಿನಾಥನೇ ಹೇಳಿದ್ದನು. "ಹಾಗಿದ್ದರೆ ಶಕ್ತಿನಾಥ! ಈ ಎರಡು ವಸ್ತುಗಳನ್ನು ತೆಗೆದುಕೊಂಡು ಹೋಗಿ ಅವಳಿಗೆ ಕೊಡು! ಅವಳು ಇನ್ನೂ ಹೆಚ್ಚಾಗಿ ಪ್ರೀತಿಸುವಳು." ಎಂದು ಹೇಳಿ, ಒಂದು ಸೀಸೆಯ ಮುಚ್ಚಳವನ್ನು ತೆಗೆದು ಸ್ವಲ್ಪ 'ದಿಲ್‌ಖುಷ್' ಸೆಂಟನ್ನು ಅವನ ಮೈಮೇಲೆ ಚಿಮುಕಿಸಿದಳು. ಅದರ ಸುಗಂಧದಿಂದ ಶಕ್ತಿನಾಥನು ಪುಲಕಿತನಾದನು ಮತ್ತು ಆ ಎರಡು ಸೀಸೆಗಳನ್ನೂ ತನ್ನ ಅಂಗವಸ್ತ್ರದ ಒಂದು ತುದಿಯಲ್ಲಿ ಕಟ್ಟಿಕೊಂಡು, ಮರುದಿನವೇ ಮನೆಯನ್ನು ಸೇರಿದನು.

## ೧೩

ಶಕ್ತಿನಾಥನು ಮಂದಿರವನ್ನು ಪ್ರವೇಶಿಸಿದನು. ಪೂಜೆಯು ಮುಗಿಯಿತು. ಅಂಗವಸ್ತ್ರದಲ್ಲಿ ಸೆಂಟಿನ ಸೀಸೆಗಳು ಹಾಗೆಯೇ ಇದ್ದುವು; ಆದರೆ ಅದನ್ನು ಅವಳಿಗೆ ಕೊಡುವ ಸಾಹಸವಾಗಲಿಲ್ಲ ಈ ಕೆಲವು ದಿನಗಳಲ್ಲಿ ಸುವರ್ಣೆಯು ತನ್ನಿಂದ ಬಹಳ ದೂರ ಸರಿದಿರುವಂತೆ ಅವನಿಗೆನಿಸಿತು; ಆದ್ದರಿಂದ ಅವನು ಬಾಯಿಬಿಟ್ಟು "ಈ ಸಾಮಾನುಗಳನ್ನು ನಿನಗಾಗಿ ಕಲ್ಕತ್ತೆಯಿಂದ

ಬಹಳ ಜೋಪಾನವಾಡಿ ತಂದಿರುವೆನು. ಸುಗಂಧದಿಂದ ನಿನ್ನ ದೇವರು ತೃಪ್ತನಾಗುವಂತೆ ನೀನೂ ತೃಪ್ತಳಾಗುವೆ" ಎಂದು ಹೇಳಲಾರದೆ ಹೋದ. ಹೀಗೆಯೇ ಏಳು ದಿನಗಳು ಕಳೆದವು. ಪ್ರತಿದಿನವೂ ಅಂಗವಸ್ತ್ರದಲ್ಲಿ ಕಟ್ಟಿಕೊಂಡು ಆ ಸೀಸೆಗಳನ್ನು ತೆಗೆದುಕೊಂಡು ಹೋಗುವುದು, ಅವುಗಳನ್ನು ಹಾಗೆಯೇ ಹಿಂದಕ್ಕೆ ತರುವುದು ಮತ್ತು ಪುನಃ ಅದನ್ನು ಮರುದಿನಕ್ಕೋಸ್ಕರ ಜೋಪಾನವಾಗಿ ಎತ್ತಿರಿಸುವುದು,- ಹೀಗೆಯೇ ಮಾಡತೊಡಗಿದನು. ಸುವರ್ಣೆಯು ಮೊದಲಿನಂತೆ ಅವನನ್ನು ಒಂದು ದಿನವಾದರೂ ಕರೆದು ಮಾತನಾಡಿಸಿದ್ದರೆ, ಬಹುಶಃ ಅವನು ತನ್ನ ಉಪಹಾರವನ್ನು ಅವಳಿಗೆ ಕೊಟ್ಟುಬಿಡುತ್ತಿದ್ದನೇನೋ! ಆದರೆ ಅಂತಹ ಸಮಯವು ಅವನಿಗೆ ಪುನಃ ಸಿಗಲೇ ಇಲ್ಲ.

ಈಗ ಎರಡು ದಿನಗಳಿಂದಲೂ ಅವನಿಗೆ ಜ್ವರ ಬರುತ್ತಿದೆ; ಆಷ್ಟಾದರೂ ಅವನು ಹೆದರಿಕೊಂಡು ಪೂಜೆಗೆ ಹೋಗುವನು ಯಾವುದೋ ಅಜ್ಞಾತ-ಭಯದಿಂದ ತನ್ನ ಶಾರೀರಿಕ ಬಾಧೆಯನ್ನು ಸಹ ಅವಳ ಸಂಗಡ ಹೇಳಿಕೊಳ್ಳಲಾರದೆ ಹೋದನು; ಆದರೆ ಅವನು ಎರಡು ದಿನಗಳಿಂದಲೂ ಊಟ ಮಾಡಿಲ್ಲವೆಂದೂ, ಪೂಜೆಗೆ ಮಾತ್ರ ಬರುತ್ತಿರುವನೆಂದೂ ಸುವರ್ಣೆಯು ಅದೆಂತೋ ತಿಳಿದುಕೊಂಡಳು. "ನೀವು ಎರಡು ದಿನಗಳಿಂದ ಏನೂ ತಿಂದಿಲ್ಲವೇ?" ಎಂದು ಕೇಳಿದಳು.

ಶಕ್ತಿನಾಥನು ಶುಷ್ಕಕಂಠದಿಂದ ನುಡಿದನು "ಪ್ರತಿನಿತ್ಯವೂ ರಾತ್ರಿ-ಈಗೆರಡು ದಿನಗಳಿಂದ— ಜ್ವರ ಬರುವುದು."

"ಜ್ವರ ಬರುತ್ತಿದೆಯೋ? ಹಾಗಿದ್ದರೆ ನೀವು ಸ್ನಾನಮಾಡಿ ಪೂಜೆಗೇತಕ್ಕೆ ಬರುವಿರಿ? ಈ ವಿಷಯವನ್ನು ನನ್ನ ಸಂಗಡ ಏಕೆ ಹೇಳಲಿಲ್ಲ?"

ಶಕ್ತಿನಾಥನ ಕಣ್ಣುಗಳು ಕಂಬನಿದುಂಬಿದುವು. ಅವನು ಕ್ಷಣದಲ್ಲಿ ಎಲ್ಲವನ್ನೂ ಮರೆತನು ಮತ್ತು ಅಂಗವಸ್ತ್ರದಲ್ಲಿ ಕಟ್ಟಿರಿಸಿದ್ದ ಸೀಸೆಗಳನ್ನು ತೆಗೆದು "ಇದನ್ನು ನಿನಗಾಗಿ ತಂದಿರುವೆನು!" ಎಂದನು.

"ನನಗಾಗಿಯೇ?"

"ಹೌದು! ಸುಗಂಧವೆಂದರೆ ನಿನಗೆ ಪ್ರಿಯವಲ್ಲವೇ?"

ಕಾದಿರುವ ಹಾಲು ಸ್ವಲ್ಪ ಉರಿ ತಾಗಿದ ಕೂಡಲೇ ಯಾವರೀತಿ ದಳದಳನೆ ಕುದಿಯತೊಡಗುವುದೋ, ಅದೇ ರೀತಿ ಸುವರ್ಣೆಯ ಶರೀರದ ರಕ್ತವೂ

ಕುದಿಯತೊಡಗಿತು. ಸೀಸೆಯನ್ನು ನೋಡಿದಾಗಲೇ ಅವಳು ಅದೇನೆಂಬು ದನ್ನು ತಿಳಿದುಕೊಂಡಳು. ಗಂಭೀರ ಸ್ವರದಿಂದ "ಕೊಡಿ!" ಎಂದು, ಕೈ ಯಲ್ಲಿ ತೆಗೆದುಕೊಂಡು, ಪೂಜೆಮಾಡಿದ ಒಣ ನಿರ್ಮಾಲ್ಯವು ಬಿದ್ದಿರುವ ಕಡೆಗೆ (ಮಂದಿರದ ಹೊರಕ್ಕೆ) ಆ ಎರಡು ಸೀಸೆಗಳನ್ನೂ ಎಸೆದುಬಿಟ್ಟಳು! ಶಕ್ತಿ ನಾಥನು ದಿಕ್ಕುತೋರದೆ ಅವಾಕ್ಕಾದನು. ಸುವರ್ಣೆಯು ಕಠೋರ ಸ್ವರದಿಂದ ನುಡಿದಳು "ನಿಮ್ಮ ಹೃದಯದಲ್ಲಿ ಒಳಗಿಂದೊಳಗೇ ಇಷ್ಟು ತುಂಬಿರುವುದೇ? ಇನ್ನು ನಿಮ್ಮ ಮುಖವನ್ನು ನನಗೆ ತೋರಬೇಡಿ! ಈ ಮಂದಿರಕ್ಕೆ ಕಾಲಿಡ ಬೇಡಿ!" ಎಂದು, ತನ್ನ ಅಂದವಾದ ತೋರು ಬೆಟ್ಟಿನಿಂದ ಹೊರಗಿನ ಹಾದಿ ಯನ್ನು ತೋರಿಸುತ್ತ ಕಠೋರ ಧ್ವನಿಯಿಂದ "ಹೊರಡಿ!" ಎಂದಳು.

೧೪

ಶಕ್ತಿನಾಥನು ಹೋಗಿ ಇಂದಿಗೆ ಮೂರು ದಿನಗಳಾದುವು. ಪುನಃ ಯದುನಾಥಾಚಾರ್ಯರೇ ಬಂದು ಪೂಜೆಮಾಡತೊಡಗಿದರು. ಮ್ಲಾನ ಮುಖ ದಿಂದ ಸುವರ್ಣೆಯು ಪೂಜೆಯನ್ನು ನೋಡತೊಡಗಿದಳು. ಯಾರದೋ ಪೂಜೆ ಯನ್ನು ಯಾರೊ ಬಂದು ಸಮಾಪ್ತಿ ಮಾಡುತ್ತಿರುವಂತೆ ಅವಳಿಗೆನಿಸಿತು! ಪೂಜೆಯು ಮುಗಿಯಿತು. ಅಂಗವಸ್ತ್ರದಲ್ಲಿ ನೈವೇದ್ಯವನ್ನೂ ಕಟ್ಟಿಕೊಳ್ಳು ವಾಗ ಆಚಾರ್ಯರು ಒಮ್ಮೆ ನಿಟ್ಟುಸಿರೆಳೆದು "ಪಾಪ! ಹುಡುಗನು ಯಾವ ಚಿಕಿತ್ಸೆಯೂ ಇಲ್ಲದೆ ಸತ್ತುಹೋದ!" ಎಂದರು.

ಸುವರ್ಣೆಯು ಗಾಬರಿಯಿಂದ ಆಚಾರ್ಯರ ಕಡೆ ತಿರುಗಿ "ಯಾರು ಸತ್ತವರು?" ಎಂದು ಕೇಳಿದಳು

"ಏಕೆ, ನಿನಗೆ ಗೊತ್ತಾಗಲಿಲ್ಲವೇ? ಅವನೇ, ನಮ್ಮ ಮಧುಸೂಧನ ಭಟ್ಟಾಚಾರ್ಯರ ಮಗನು, ಕೆಲವು ದಿನಗಳಿಂದ ಜ್ವರದಲ್ಲಿ ನರಳಿ, ಇಂದು ಬೆಳಿಗ್ಗೆ ಮೃತಿಹೊಂದಿದನು

ಆಷ್ಟಾದರೂ ಸುವರ್ಣೆಯು ಆಚಾರ್ಯರ ಮುಖದ ಕಡೆಯೇ ನೋಡು ತ್ತಿದ್ದಳು. ಆಚಾರ್ಯರು ಬಾಗಿಲಿನಿಂದ ಹೊರಗೆ ಬಂದು "ಇತ್ತೀಚೆಗೆ ಪಾಪದ ಫಲದಿಂದ ಮೃತ್ಯುಗಳಾಗುತ್ತಿರುವುವು—ದೇವರ ಸಂಗಡ ಹುಡು ಗಾಟಿಕೆಯು ನಡೆಯುವುದೇ, ಮಗೂ!" ಎಂದರು.

ಆಚಾರ್ಯರು ಹೊರಟು ಹೋದರು. ಸುವರ್ಣೆಯು ಬಾಗಿಲನ್ನು ಮುಚ್ಚಿ, ತಲೆಯನ್ನು ನೆಲಕ್ಕೆ ಚೆಜ್ಜಿಕೊಳ್ಳುತ್ತ, ಬಿಕ್ಕಿಬಿಕ್ಕಿ ಅಳತೊಡಗಿದಳು; ಮತ್ತು ಅಳುತ್ತಳುತ್ತ, ಸಹಸ್ರ ಬಾರಿ ಪ್ರಶ್ನಿಸಿದಳು "ಹೇ, ಭಗವಾನ್ ! ಇದು ಯಾರ ಪಾಪದ ಫಲ ? "

ಬಹಳ ಹೊತ್ತಿನ ಬಳಿಕ ಅವಳು ಎದ್ದು ಕುಳಿತಳು, ಮತ್ತು ಕಣ್ಣುಗಳನ್ನೊರೆಸಿಕೊಂಡು. ಆ ಒಣನಿರ್ಮಾಲ್ಯದ ನಡುವೆ ಬಿದ್ದಿದ್ದ ಸ್ನೇಹದಾನವನ್ನು ಎತ್ತಿಕೊಂಡು ಕಣ್ಣಿಗೊತ್ತಿಕೊಂಡಳು ! ಪುನಃ ಮಂದಿರದೊಳಕ್ಕೆ ಬಂದು ದೇವರ ಚರಣಕಮಲಗಳ ಬಳಿ ಅದನ್ನಿಟ್ಟು "ಹೇ ಭಗವಾನ್ ! ನಾನು ಸ್ವೀಕರಿಸದಿದ್ದ ಪದಾರ್ಥವನ್ನು ನೀನು ಸ್ವೀಕರಿಸು ! ನನ್ನ ಕೈಯಾರ ನಾನೆಂದೂ ನಿನ್ನ ಪೂಜೆಮಾಡಿರಲಿಲ್ಲ, ಇಂದು ಮಾಡುತ್ತಿರುವೆನು,—ಸ್ವೀಕರಿಸು ಸ್ವಾಮಿ ! ಸಂತೃಪ್ತನಾಗು ! ನನಗೆ ಬೇರೆ ಏನೂ ಆಕಾಂಕ್ಷೆಯಿಲ್ಲ, ದೇವಾ ! ಎಂದಳು.

# ಮೊಕದ್ದಮೆಯ ಪರಿಣಾಮ

ವೃದ್ಧ ವೃಂದಾವನ ಸಾಮಂತರು ಸ್ವರ್ಗವನ್ನೈದಿದ ಬಳಿಕ, ಅವರ ಮಕ್ಕಳಾದ ಶಿವ ಮತ್ತು ಶಂಭುಗಳಿಬ್ಬರೂ ಪ್ರತಿದಿನವೂ ಕಾದಾಡುತ್ತ-ಜಗಳ ಮಾಡುತ್ತ, ಹಾಗೂ ಹೀಗೂ ಐದಾರು ತಿಂಗಳತನಕ ಒಂದೇ ಮನೆಯಲ್ಲಿದ್ದರು. ನಂತರ ಒಂದು ದಿನ ಅವರಿಬ್ಬರೂ ಬೇರೆಬೇರೆಯಾದರು.

ಗ್ರಾಮದ ಜಮೀನದಾರರೇ ಸ್ವತಃ ಇವರಿಬ್ಬರ ಆಸ್ತಿ-ಪಾಸ್ತಿ, ಹೊಲ-ಗದ್ದೆ, ಮನೆ-ಜಮೀನು ಮುಂತಾದುವನ್ನು ಭಾಗಮಾಡಿದರು. ಚಿಕ್ಕ ಮಗನಾದ ಶಂಭುವು ಎದುರಿಗಿದ್ದ ಕೆರೆಯ ಪಕ್ಕಕ್ಕೆ ಒಂದು ಮಣ್ಣಿನ ಮನೆಯನ್ನು ಕಟ್ಟಿಕೊಂಡು, ತನ್ನ ಪತ್ನಿ-ಪುತ್ರರೊಡನೆ ಆ ಮನೆಯಲ್ಲಿರತೊಡಗಿದನು.

ಆಸ್ತಿಯೆಲ್ಲವೂ ಭಾಗವಾಯಿತು, ಆದರೆ ಮನೆಯ ಪಕ್ಕಕ್ಕಿದ್ದ ಒಂದು ಬಿದಿರು ಮೆಳೆಯು ಮಾತ್ರ ಭಾಗವಾಗಲಿಲ್ಲ. ದೊಡ್ಡ ಮಗನಾದ ಶಿವನು “ ಜಮೀನುದಾರರೇ ! ಬಿದಿರಿನ ಅವಶ್ಯಕತೆ ನನಗೆ ಬಹಳವಾಗಿದೆ. ಏಕೆಂದರೆ ಮನೆ ಬಹಳ ಹಳೆಯದು, ಶಿಥಿಲವಾಗಿ ಹೋಗಿದೆ ಚಪ್ಪರ ಮತ್ತು ಮೇಲ್ಛಾವಣಿ ಹಾಕಿಸಲು ನನಗೆ ಬಿದಿರು ಬೇಕೇ ಬೇಕು! ಊರಿನಲ್ಲಿ ಯಾರನ್ನು ಕೇಳುವುದಕ್ಕೆ ಹೋಗಲಿ, ನೀವೇ ಹೇಳಿ ? ” ಎಂದನು.

ಶಂಭುವು ಇದನ್ನು ಪ್ರತಿವಾದಿಸುತ್ತ, ಅಣ್ಣನ ಮೋರೆಯನ್ನು ತಿವಿದು ಜಣಕಿಸುತ್ತ “ ಅಹಹಹ! ಪಾಪ, ಇವರ ಮನೆ-ಮೇಲ್ಛಾವಣಿಗೆ ಮಾತ್ರ ಬಿದಿರು ಬೇಕು; ನನ್ನ ಮನೆಗೆ ಬಾಳೆಯ ಕಂಬದಿಂದ ಕೆಲಸವಾಗುವುದೋ ! ಇದೆಲ್ಲಾ ಆಗುವುದಿಲ್ಲ. ಜಮೀನದಾರರೇ ! ಬಿದಿರಿಲ್ಲದೆ ನನ್ನ ಕೆಲಸವೇ ಆಗುವುದಿಲ್ಲ ! ” ಎಂದನು.

ಚರ್ಚೆಯು ಅಷ್ಟಕ್ಕೇ ನಿಂತಿತು. ಪರಿಣಾಮ-ಫಲವಾಗಿ ಬಿದಿರು ಮೆಳೆಯು ಇವರಿಬ್ಬರ ಸಮ್ಮಿಳಿತ ಆಸ್ತಿಯಾಗಿ ಉಳಿಯಿತು. ಅಂತೂ ಶಂಭುವು ಅದರ ಒಂದು ಕೊಂಬೆಯನ್ನು ಮುರಿಯಲು ಹೋದರೆ ಶಿವನು ಹಾರೆಯನ್ನೇ ತೆಗೆದುಕೊಂಡು ಹೊಡೆಯಲು ಹೋಗುವನು; ಶಿವನ ಹೆಂಡ

ತಿಯು ಗಿಡದ ಬಳಿ ಕಾಲಿಟ್ಟಳೆಂದರೆ ಶಂಭುವು ದೊಣ್ಣೆಯಿಂದಲೇ ಹೊಡೆ
ಯಲು ಹೋಗುವನು.

ಒಂದು ದಿನ ಬೆಳಿಗ್ಗೆ ಇದೇ ಬಿದಿರು ಮೆಳೆಯ ಕಾರಣದಿಂದ ಈ ಎರಡು
ಪರಿವಾರಗಳಲ್ಲಿ ಭಾರಿಯ ಜಗಳವಾಯಿತು. ಷಷ್ಠಿ ದೇವಿಯ ಪೂಜೆಗೋ
ಅಥವಾ ಮತ್ತಾವ ದೇವಕಾರ್ಯಕ್ಕೋ, ದೊಡ್ಡ ಸೊಸೆ ಗಂಗಾಮಣಿಗೆ
ಸ್ವಲ್ಪ ಬಿದಿರೆಲೆ ಬೇಕಾಗಿತ್ತು. ಹಳ್ಳಿಯಲ್ಲಿ ಬಿದಿರೆಲೆಗೇನೂ ದರಿದ್ರವಿರಲಿಲ್ಲ,
ಎಲ್ಲಿಂದಾದರೂ ತರಿಸಬಹುದಾಗಿತ್ತು. ಆದರೆ ತಮ್ಮ ಮನೆಯಲ್ಲೇ ಗಿಡ
ವನ್ನಿಟ್ಟುಕೊಂಡು ಇತರರ ಮುಂದೆ ಕೈನೀಡುವುದು ಅವಳಿಗೆ ಅಸಹ್ಯವೆನಿ
ಸಿತು. ಇಷ್ಟು ಹೊತ್ತಿಗೆ ಮೈದುನನು ಹೊಲಕ್ಕೆ ಹೊರಟು ಹೋಗಿರುವನು.
ಚಿಕ್ಕ ಸೊಸೆಯೊಬ್ಬಳೇ ಏನುಮಾಡಬಲ್ಲಳು? ಎಂಬುದೇ ಅವಳ ಮುಖ್ಯ
ಯೋಚನೆಯಾಗಿತ್ತು.

ಆದರೆ ಅಂದು, ಏನೋ ಕಾರಣಾಂತರದಿಂದ ಶಂಭುವಿಗೆ ಹೊಲಕ್ಕೆ
ಹೋಗುವುದು ತಡವಾಯಿತು. ತಂಗಳನ್ನವನ್ನುಂಡು ಕೈತೊಳೆಯುತ್ತಿದ್ದನು.
ಅಷ್ಟರಲ್ಲೇ ಚಿಕ್ಕ ಸೊಸೆಯು ನದಿಯ ದಡದ ಕಡೆಯಿಂದ ಬೀಳುವುದೇಳುವು
ದನ್ನೂ ಕಾಣದೆ ಓಡಿ ಬಂದಳು; ಮತ್ತು ಪತಿಯೊಡನೆ ನಡೆದ ವಿಷಯವೆಲ್ಲ
ವನ್ನೂ ವಿವರಿಸಿದಳು. ಅವನು ಕೈತೊಳೆಯುವುದನ್ನೂ ಬಿಟ್ಟು, ಚೊಂಬನ್ನು
ಅಲ್ಲೇ ಎಸೆದು, ಬೀದಿಯ ಜನರೆಲ್ಲರಿಗೂ ಕೇಳಿಸುವಂತೆ ಜೋರಾಗಿ ಕೂಗಾ
ಡುತ್ತ, ಬೀಳುವುದೇಳುವುದನ್ನೂ ಕಾಣದೆ ಘಟನಾಸ್ಥಳಕ್ಕೆ ಓಡಿ ಬಂದನು;
ಮತ್ತು ಎಂಜಲು ಕೈಯಿಂದಲೇ ಅತ್ತಿಗೆಯ ಕೈಯಲ್ಲಿದ್ದ ಬಿದಿರೆಲೆಯನ್ನು ಕಿತ್ತೆ
ಸೆದನು ಹಾಗೂ ಬಿರುನುಡಿಯ ಸುರಿಮಳೆಯನ್ನು ಕರೆದನು. ಇತ್ತ ದೊಡ್ಡ
ಸೊಸೆಯು ಅಳುತ್ತ ಮನೆಗೆ ಬಂದಳು, ಮತ್ತು ಒಡನೆಯೇ, ಹೊಲದಲ್ಲಿ
ಕೆಲಸ ಮಾಡುತ್ತಿದ್ದ ಪತಿಗೆ ವಿಷಯವನ್ನು ಹೇಳಿ ಕಳುಹಿಸಿದಳು. ಶಿವನು
ನೇಗಿಲನ್ನು ಬಿಟ್ಟು ಓಡಿಬಂದನು; ಮತ್ತು ಬಿದಿರು ಗಿಡದ ಬಳಿ ನಿಂತು,
ತಮ್ಮನ ವಿಷಯವಾಗಿ ಕ್ರೋಧದ ಸುರಿಮಳೆಯನ್ನು ಕಾರುತ್ತ, ಕೂಗಾಡ
ತೊಡಗಿದನು. ಇವನ ಕೂಗಾಟವನ್ನು ಕೇಳಿ ಸುತ್ತಲೂ ಕೇರಿಯ ಜನರು
ನೆರೆದರು. ಇಷ್ಟರಿಂದಲೇ ಅವನು ತೃಪ್ತನಾಗಲಿಲ್ಲ. ಜಮೀನದಾರರ ಬಳಿಗೆ
ಘಟನೆಯ ನ್ಯಾಯಕ್ಕಾಗಿ ಹೋದನು. ಒಂದು ವೇಳೆ ಅವರೂ ಸರಿಯಾದ
ನ್ಯಾಯವನ್ನು ಕೊಡದೆ ಹೋದರೆ, ಕೋರ್ಟಿನಲ್ಲಿ ಒಂದನೆಯ ದರ್ಜೆಯ

ಮೊಕದ್ದಮೆಯನ್ನು ನಡೆಸದಿದ್ದಲ್ಲಿ ತನ್ನ ಹೆಸರು ಶಿವ ಸಾಮಂತನಲ್ಲವೆಂದು ಶೀರ್ಮಾನಿಸಿಕೊಂಡನು !

ಅತ್ತ ಶಂಭುವು ಬಿದಿರೆಲೆಯನ್ನು ಕಿತ್ತಿಸೆದು, ತನ್ನ ಕರ್ತವ್ಯವನ್ನು ಪೂರೈಸಿ, ಎತ್ತುಗಳನ್ನು ಹೊಡೆದುಕೊಂಡು ಉಳುವುದಕ್ಕೆ ಹೊರಟನು. ಪತ್ನಿಯು ಬೇಡವೆಂದು ಹೇಳಿದರೂ ಕೇಳಲಿಲ್ಲ ಮನೆಯಲ್ಲಿ ಅವಳೊಬ್ಬಳೇ ಇದ್ದಳು; ಅಷ್ಟರಲ್ಲೇ ಕ್ರೋಧಾವೇಶಭರಿತನಾದ ಶಿವನು ಬಂದು, ವೀರದರ್ಪದಿಂದ ಅವಳನ್ನು ಬಾಯಿಗೆ ಬಂದಂತೆ ಬೈದು ಹೊರಟು ಹೋದನು. ಚಿಕ್ಕ ಸೊಸೆಯಾದ್ದರಿಂದ ಅವಳು ಅವನು ಬೈದ ಮಾತುಗಳೆಲ್ಲವನ್ನೂ ಸಹಿಸಿಕೊಂಡು, ಮಾರುತ್ತರ ಕೊಡದೆ ಇರಬೇಕಾಯಿತು. ಇದರಿಂದ ಅವಳ ಮನಸ್ತಾಪ ಮತ್ತು ಪತಿಯ ಬಗ್ಗೆ ಅಪ್ರಸನ್ನತೆಯ ಮೇರೆ ಇಲ್ಲದಾಯಿತು. ಅವಳು ಅಡಿಗೆಯ ಮನೆಯ ಕಡೆ ಇಣಿಕಿ ಸಹ ನೋಡಲಿಲ್ಲ. ಅಂಗಳದಲ್ಲಿ, ಉದಾಸೀನ ಭಾವದಿಂದ ಕಾಲುಚಾಚಿಕೊಂಡು ಸುಮ್ಮನೆ ಕುಳಿತುಬಿಟ್ಟಳು.

ಇತ್ತ ಶಿವನ ಮನೆಯಲ್ಲೂ ಇದೇ ಸ್ಥಿತಿಯಾಯಿತು. ಅವನ ಪತ್ನಿಯು ವಿಷಯದ ಶೀರ್ಮಾನವಾದ ಹೊರತು ಈ ಮನೆಯಲ್ಲಿ ಒಂದು ತೊಟ್ಟು ನೀರನ್ನು ಸಹ ಕುಡಿಯುವುದಿಲ್ಲನೆಂದೂ ತನ್ನ ತವರು ಮನೆಗೆ ಹೊರಟು ಹೋಗುವೆನೆಂದೂ ಭೀಷಣ ಪ್ರತಿಜ್ಞೆಮಾಡಿ, ಪತಿಯ ಹಾದಿಯನ್ನೇ ಇದಿರು ನೋಡುತ್ತ ಕುಳಿತುಬಿಟ್ಟಳು. ಒಂದೆರಡು ಬಿದಿರೆಲೆಗಾಗಿ ಮೈದುನನ ಕೈಯಿಂದ ಇಂತಹ ಅಪಮಾನವೇ ?

ಮಧ್ಯಾಹ್ನ ಎರಡೂವರೆ ಗಂಟೆಯಾಗುತ್ತ ಬಂತು ಆದರೂ ಶಿವನು ಮನೆಗೆ ಬರಲಿಲ್ಲ. ಜಮೀನದಾರರ ಮನೆಯಿಂದ ನೆಟ್ಟಗೆ ಕೋರ್ಟಿಗೆ ಮೊಕದ್ದಮೆ ಹೂಡಲು ಹೊರಟು ಹೋದರೇನೋ? ಎಂದು ಮನಸ್ಸಿನಲ್ಲೇ ತವಕಪಡತೊಡಗಿದಳು.

ಅಷ್ಟರಲ್ಲಿ ಜೋರಾದ ಶಬ್ದದೊಡನೆ ಹೊರಗಿನ ಬಾಗಿಲು ತೆರೆಯಿತು. ಶಂಭುವಿನ ದೊಡ್ಡಮಗನಾದ ಗಯಾರಾಮನು ಒಳಗೆ ಪ್ರವೇಶಿಸಿದನು. ಅವನ ವಯಸ್ಸು ಸುಮಾರು ಹದಿನಾರು ಹದಿನೇಳಿರಬಹುದು; ಆದರೆ ಅವನ ಕ್ರೋಧ ಮತ್ತು ಭಾಷೆಗಳು ತಂದೆಯನ್ನೂ ಮೀರಿದ್ದುವು! ಅವನು ಆ ಊರಿನ ಮೈನರ ಸ್ಕೂಲಿನಲ್ಲಿ ಓದುತ್ತಿದ್ದನು. ಆಗ ಬೆಳಗಿನ ಶಾಲೆಯಾದ್ದರಿಂದ, ಅವನಿಗೆ ೧೧ಕ್ಕೆ ಗಂಟೆಗೇ ಶಾಲೆಯು ಮುಗಿದು ಹೋಗಿತ್ತು;

ಗಂಗಾರಾಮನು ಒಂದು ವರ್ಷದ ಮಗುವಾಗಿದ್ದಾಗಲೇ ಅವನ ಮಾತೆಯು ಮೃತಿಯನ್ನೈದಿದಳು. ಅವನ ತಂದೆಯಾದ ಶಂಭುವು ಎರಡನೆಯ ವಿವಾಹವನ್ನು ಮಾಡಿಕೊಂಡು ಹೆಂಡತಿಯನ್ನೇನೋ ಮನೆಗೆ ಕರೆತಂದನು; ಆದರೆ ಈ ಮಾತೃಹೀನ ಮಗುವಿನ ಪಾಲನೆಯ ಭಾರವು ದೊಡ್ಡಮ್ಮನಾದ ಗಂಗಾಮಣಿಯ ತಲೆಗೇ ಕಟ್ಟಿತು. ಅಂದಿನಿಂದ ಇಂದಿನವರೆಗೂ — ಅಣ್ಣ ತಮ್ಮಂದಿರು ಬೇರಾಗುವವರೆಗೂ— ಅವಳೇ ಇವನನ್ನು ನೋಡಿಕೊಳ್ಳುತ್ತ ಬಂದಿದ್ದಳು. ಮಲತಾಯಿಯ ಬಳಿ ಅವನಿಗೆ ಎಳ್ಳಷ್ಟೂ ಪ್ರೀತಿ ಇರಲಿಲ್ಲ; ಅಷ್ಟೇಏಕೆ? ಅಪ್ಪದೊಡ್ಡಪ್ಪಂದಿರು ಬೇರೆಯಾದ ಬಳಿಕೂ ಅವನು ತನಗಿಷ್ಟ ಬಂದಲ್ಲಿ ಊಟಮಾಡಿಕೊಂಡು ಇದ್ದು ಬಿಡುತ್ತಿದ್ದನು.

ಇಂದು ಅವನು ಸ್ಕೂಲಿನಿಂದ ಮನೆಗೆ ಹೋದಾಗ, ಮಲತಾಯಿಯ ಮುಖವನ್ನೂ ಮತ್ತು ಅವಳು ಊಟಕ್ಕಾಗಿ ಏನೂ ಏರ್ಪಾಡು ಮಾಡದಿದ್ದುದನ್ನೂ ಕಂಡು, ಅವನಿಗೆ ಮಿತಿಮೀರಿದ ಕೋಪವುಂಟಾಯಿತು. ಅಲ್ಲಿಂದ ಈ ಮನೆಗೆ ಬಂದನು. ಇಲ್ಲಿ ದೊಡ್ಡಮ್ಮನ ಮುಖವನ್ನು ನೋಡಿ ಅವನ ಕ್ರೋಧಾಗ್ನಿಯು ಆರಲಿಲ್ಲ, ಉರಿಯುತ್ತಿರುವ ಬೆಂಕಿಗೆ ತುಪ್ಪ ಹಾಕಿದಂತಾಯಿತು. ಕ್ರೋಧದಿಂದಲೇ ಅವನು " ಊಟಕ್ಕೆ ಬಡಿಸು, ದೊಡ್ಡಮ್ಮ! " ಎಂದನು.

ದೊಡ್ಡಮ್ಮನು ಮಾತನಾಡಲಿಲ್ಲ. ಕುಳಿತಲ್ಲೇ ಕುಳಿತಿದ್ದಳು

ಕ್ರುದ್ಧ ಗಂಗಾರಾಮನು ಕಾಲಿನಿಂದ ನೆಲವನ್ನು ಜೋರಾಗಿ ಕುಟ್ಟುತ್ತ " ಬಡಿಸುವೆಯೊ ಇಲ್ಲವೊ, ಹೇಳು! " ಎಂದನು.

ಗಂಗಾಮಣಿಯು ತಲೆಯೆತ್ತಿ, ಕ್ರೋಧದಿಂದ ಗರ್ಜಿಸುತ್ತ ನುಡಿದಳು "ನಿನಗಾಗಿ ಅಡಿಗೆ ಮಾಡಿಟ್ಟಿರುವೆನಲ್ಲವೇ, ಬಡಿಸುವುದಕ್ಕೆ? ನಿನ್ನ ಅಭಾಗಿನಿ ಮಲತಾಯಿಯು ನಿನಗೆ ಊಟಕ್ಕೆ ಬಡಿಸಲಿಲ್ಲವೇ? ಇಲ್ಲಿಗೇತಕ್ಕೆ ಬಂದೆ, ಗಲಾಟೆಮಾಡುವುದಕ್ಕೆ? " ಗಂಗಾರಾಮನು ಕಿರುಚುತ್ತ ನುಡಿದನು " ಆ ಅಭಾಗಿನಿಯ ವಿಷಯ ನನಗೇನೂ ಗೊತ್ತಿಲ್ಲ. ನೀನು ಊಟಕ್ಕಿಡುವೆಯೊ ಇಲ್ಲವೊ, ಹೇಳು! ಇಲ್ಲದಿದ್ದರೆ ನಿನ್ನ ಪಾತ್ರೆ-ಮಡಿಕೆಗಳನ್ನೆಲ್ಲಾ ಒಡೆದು ಬಿಡುವೆನು, ಇದೋ ನೋಡು! " ಎನ್ನುತ್ತ, ಇಟ್ಟಿಗೆಯ ರಾಶಿಯ ಬಳಿ ಬಿದ್ದಿದ್ದ ಒಂದು ಕೋಲನ್ನುತೆಗೆದುಕೊಂಡು ಅಡಿಗೆಮನೆಯ ಕಡೆ ಹೊರಟನು.

ದೊಡ್ಡಮ್ಮನು ಹೆಸರಿಕೆಯಿಂದ ಜೋರಾಗಿ ಕೂಗಿಕೊಂಡಳು "ಗಯಾರಾಮ! ನೀಚ! ಇನ್ನು ಹೆಚ್ಚು ಗಲಾಟೆ ಮಾಡಿಸಿಯಾದರೆ ಸುಮ್ಮನಿರುವುದಿಲ್ಲ, ನೋಡಿಕೋ! ಇನ್ನೂ ಮಡಿಕೆಗಳನ್ನು ತೆಗೆದು ಎರಡು ದಿನಗಳು ಸಹ ಆಗಲ್ಲ; ಒಂದು ಮಡಕೆಯನ್ನಾಗಲಿ ಒಡೆದೆಯಾದರೆ, ನಿಮ್ಮ ದೊಡ್ಡಪ್ಪನ ಸಂಗಡ ಹೇಳಿ ಕಾಲು ಮುರಿಸಿಬಿಡುವೆನು, ಜೋಕೆ!"

ಗಯಾರಾಮನು ಅಡಿಗೆಮನೆಯ ಚಿಲಕವನ್ನು ತೆಗೆಯುವುದರಲ್ಲಿದ್ದನು. ಅಷ್ಟರಲ್ಲೇ ಅವನಿಗೆ ಒಂದು ಹೊಸ ವಿಷಯವು ನೆನಪಿಗೆ ಬಂದಿತು. ಅವನು ಶಾಂತಭಾವವನ್ನು ತಳೆದು ನುಡಿದನು "ಹೋಗಲಿ, ಊಟಕ್ಕೆ ಬಡಿಸದಿದ್ದರೆ ಬೇಡ, ಬಿಡು! ನನಗೆ ಬೇಡವೇ ಬೇಡ! ನದಿಯ ದಡದಲ್ಲಿ ಅನೇಕ ಮಂದಿ ಬ್ರಾಹ್ಮಣ ಕನ್ಯೆಯರು ಮಕ್ಕರಿಯ ತುಂಬ ಪುರಿ-ಮಿಠಾಯಿಗಳನ್ನಿಟ್ಟುಕೊಂಡು ಪೂಜೆ ಮಾಡುತ್ತಿರುವರು; ಕೇಳಿದವರಿಗೆಲ್ಲಾ ಕೊಡುತ್ತಿರುವರು. ಈಗ ತಾನೇ ನೋಡಿ ಬಂದಿರುವೆನು ಅಲ್ಲಿಗೇ ಹೋಗುವೆನು!"

ಅಂದು ಅರಣ್ಯಷಷ್ಠಿ ಎಂದು ಗಂಗಾಮಣಿಗೆ ತಕ್ಷಣ ನೆನಪಾಯಿತು. ಕ್ಷಣದಲ್ಲೇ ಅವಳ ಕಠೋರ ಮನಸ್ಸು ಕೋಮಲವಾಯಿತು. ಆದರೂ ಅವಳು ಮುಖದಲ್ಲಿ ಕಠೋರತೆಯನ್ನು ಸೂಚಿಸುತ್ತ "ಹೋಗು, ಹೊರಟು ಹೋಗು! ಹೇಗೆ ಹೋಗುವೆಯೋ ನೋಡುವೆನು?" ಎಂದಳು.

"ಹೋಗುವೆನು, ನೋಡು!" ಎನ್ನುತ್ತ ಗಯಾರಾಮನು ಹರುಕು ಅಂಗವಸ್ತ್ರವನ್ನು ಸೊಂಟಕ್ಕೆ ಸುತ್ತಿ, ಹೊರಡಲನುವಾದನು. ಇದನ್ನು ಕಂಡು ಗಂಗಾಮಣಿಯು ಉತ್ತೇಜಿತಳಾದಳು. "ಇಂದು ಷಷ್ಠಿಯ ದಿನ ಇತರರನ್ನು ಕೇಳಿ ತಿಂದೆಯಾದರೆ, ನಿನಗಾವ ದುರ್ಗತಿಯುಂಟಾಗುವುದೆಂದು ಬಲ್ಲೆಯಾ, ಹತಭಾಗ್ಯ?" ಎಂದು ಕ್ರೋಧದಿಂದ ನುಡಿದಳು.

ಗಯಾರಾಮನು ಉತ್ತರ ಕೊಡಲಿಲ್ಲ. ಅಡಿಗೆಮನೆಗೆ ನುಗ್ಗಿ, ಸ್ವಲ್ಪ ಎಣ್ಣೆಯನ್ನು ತೆಗೆದುಕೊಂಡು ತಲೆಗೆ ಉಜ್ಜಿಕೊಳ್ಳುತ್ತ ಹೊರಟೇ ಹೊರಟನು. ಅಷ್ಟರಲ್ಲಿ ದೊಡ್ಡಮ್ಮನು ಅಂಗಳಕ್ಕೆ ಬಂದು, ಅವನನ್ನು ಹೆದರಿಸುತ್ತ "ನೀಚ! ದೇವದೇವತೆಯರ ಸಂಗಡ ಅವಿವೇಕವೇ? ಹೋಗಿ ಸುಮ್ಮನೆ ಸ್ನಾನಮಾಡಿಕೊಂಡು ಬಂದೆಯಾದರೆ ಸರಿ! ಇಲ್ಲದಿದ್ದರೆ ನಿನಗಿಂದು ಒಳ್ಳೆಯದಲ್ಲ, ತಿಳಿದೆಯಾ?" ಎಂದಳು.

ಆದರೆ ಗಯಾರಾಮನು ಹೆದರುವ ಹುಡುಗನೇ ಆಗಿರಲಿಲ್ಲ. ಅವನು ಹಲ್ಲುಕಿರಿಯುತ್ತ ದೊಡ್ಡಮ್ಮನನ್ನು ಹಾಸ್ಯಮಾಡಿ, ಓಡಿದನು.

ಗಂಗಾಮಣಿಯು ಅವನ ಹಿಂದೆಯೇ ಬೀದಿಯವರೆಗೂ ಓಡಿಬಂದು, ಜೋರಾಗಿ ಕೂಗಿ ಹೇಳಿದಳು "ಗಯಾ! ಇಂದು ಷಷ್ಠಿಯ ದಿನ ಯಾರ ಮಕ್ಕಳು ಅನ್ನ ಉಣ್ಣುವರು? ನೀನು ಅನ್ನಕ್ಕಾಗಿ ಕೂಗಾಡುವೆಯಲ್ಲಾ? ಮಿಠಾಯಿ, ಬಾಳೆಯ ಹಣ್ಣು, ಹಾಲು-ಮೊಸರುಗಳ ಫಲಹಾರ ಮಾಡಿಕೊಂಡು ಇರಲಾಗುವುದಿಲ್ಲವೇ? ಇತರರ ಬಳಿ ಬೇಡಲು ಹೋಗುವೆಯಾ? ನಿನ್ನಂತಹ ಅಯೋಗ್ಯನು ಈ ಮನೆಯಲ್ಲೇಕೆ ಹುಟ್ಟಿದೆ?"

ಗಯಾರಾಮನು ಸ್ವಲ್ಪ ದೂರ ಹೋಗಿ, ತಿರುಗಿನಿಂತನು; ಮತ್ತು "ಹಾಗಿದ್ದರೆ ನೀನು ಕೊಡಲಿಲ್ಲವೇಕೆ, ಪಾಪಿ? ಏನೂ ಇಲ್ಲವೆಂದು ಏತಕ್ಕೆ ಹೇಳಿದೆ?" ಎಂದನು.

ಗಂಗಾಮಣಿಯು ಗದ್ದದ ಮೇಲೆ ಕೈಯಿಟ್ಟು, ಚಕಿತಳಾಗಿ ನಿಂತಳು ಮತ್ತು ನುಡಿದಳು "ನೋಡಿದೆಯಾ, ಹೇಗಿದೆ ಹುಡುಗನ ಮಾತು? ಏನೂ ಇಲ್ಲವೆಂದು ನಾನು ಯಾವಾಗ ಹೇಳಿದೆ? ಇನ್ನೂ ಸ್ನಾನ ಸಹ ಮಾಡಿಲ್ಲ? ಮನೆಗೆ ನುಗ್ಗಿದ ತಕ್ಷಣ ಊಟಕ್ಕೆ ಬಡಿಸಬೇಕಂತೆ, ಊಟ! ಇಂದು ಯಾರಾದರೂ ಅನ್ನ ಉಣ್ಣುವರೇ? ಹೋಗು, ಫಲಹಾರಕ್ಕೆಲ್ಲವೂ ಸಿದ್ಧವಾಗಿದೆ, ಸ್ನಾನ ಮಾಡಿ ಬಾ!"

"ನಿನ್ನ ಫಲಹಾರವು ಹಾಳಾಯಿತು! ನಿತ್ಯನಿತ್ಯವೂ ಅಭಾಗಿನಿಯರು ಜಗಳವಾಡಿಕೊಂಡು, ಅಡಿಗೆಮನೆಯ ಬಾಗಿಲನ್ನು ಮುಚ್ಚಿ, ಕಾಲು ಚಾಚಿಕೊಂಡು ಅಂಗಳದಲ್ಲಿ ಕುಳಿತುಬಿಡುವುದು, ಮತ್ತು ನಿತ್ಯವೂ ನಾನು ಹಸಿದ ಹೊಟ್ಟೆಗೆ ಮಧ್ಯಾಹ್ನದ ಮೇಲೆ ಆರಿದ ಅನ್ನವನ್ನುಣ್ಣುವುದೇ? ಬೇಡ! ನಿಮ್ಮಲ್ಲಿ ಯಾರ ಬಳಿಯೂ ನಾನು ಊಟ ಮಾಡುವುದಿಲ್ಲ!" ಎನ್ನುತ್ತ ಅಲ್ಲಿಂದ ಹೊರಟನು. ಇದನ್ನು ಕಂಡು ಗಂಗಾಮಣಿಯು ನಿಂತಲ್ಲೇ ನಿಂತು ಅಳು ದನಿಯಿಂದ ನುಡಿದಳು "ಇಂದು, ಷಷ್ಠಿಯ ದಿನ ಇತರರನ್ನು ಕೇಳಿ ತಿಂದು, ಅಮಂಗಳ ಮಾಡಬೇಡ ಗಯಾ! ರಾಜ ಹುಡುಗನಲ್ಲವೇ ನೀನು? ಹೋಗಲಿ, ಒಂದಾಣೆ ಕೊಡುವೆನು, ಏನಾದರೂ ತೆಗೆದು ತಿನ್ನು! ಕೇಳು!"

ಗಯಾರಾಮನು ತಿರುಗಿ ಸಹ ನೋಡಲಿಲ್ಲ. ಬೇಗಬೇಗನೆ ಅಲ್ಲಿಂದ ಹೊರಟನು, “ನಿನ್ನ ಫಲಹಾರ ಬೇಡ! ನಿನ್ನ ಕಾಸೂ ಬೇಡ! ಸಾಕಾ ಯಿತು. ನಿನ್ನ ಫಲಹಾರ!” ಮುಂತಾಗಿ ಬೈಯುತ್ತ ಮುಂದುವರಿದನು.

ಅವನು ಕಣ್ಮರೆಯಾದ ನಂತರ ಗಂಗಾಮಣಿಯು ಮನೆಗೆ ಬಂದಳು; ಮತ್ತು ಕ್ರೋಧ ದುಃಖಗಳಿಂದ ನಿರ್ಜೀವಳಂತೆ ಅಂಗಳದಲ್ಲಿ ಕುಳಿತುಬಿಟ್ಟಳು. ಗಯಾರಾಮನ ಈ ಪರಿಯ ನಡವಳಿಕೆಯಿಂದ ಮರ್ಮಾಹತಳಾಗಿ, ಅವನ ಮಲತಾಯಿಯನ್ನು ಶಪಿಸತೊಡಗಿದಳು.

ಅತ್ತ ನದಿಯ ಕಡೆ ಹೋಗುತ್ತಿದ್ದಂತೆ, ಗಯಾರಾಮನ ಕಿವಿಗಳಲ್ಲಿ ದೊಡ್ಡಮ್ಮನು ಹೇಳಿದ ಮಾತುಗಳೇ ಪ್ರತಿಧ್ವನಿತವಾಗುತ್ತಿದ್ದುವು. ರುಚಿ ಯಾದ ಊಟ ತಿಂಡಿಗಳೆಂದರೆ ಮೊದಲೇ ಅವನಿಗೆ ಆಸೆ. ಅದರಲ್ಲೂ ಮಿಠಾಯಿ, ಹಾಲು ಮೊಸರು, ಬಾಳೆಯ ಹಣ್ಣು ಎಂದ ಬಳಿಕ ಕೇಳಬೇಕೆ? ಸಾಲದುದಕ್ಕೆ ಒಂದಾಣೆ ದಕ್ಷಿಣೆ ಬೇರೆ! ಅವನ ಮನಸ್ಸು ಕೆಲವು ನಿಮಿಷ ಗಳಲ್ಲೇ ಬದಲಾಯಿಸಿತು.

ಸ್ನಾನ ಮಾಡಿಕೊಂಡು, ಗಯಾರಾಮನು ಬಹಳ ಹಸಿವೆಯೊಡನೆ ಮನೆಗೆ ಬಂದನು. ಅಂಗಳದಲ್ಲೇ ನಿಂತುಕೊಂಡು ಜೋರಾಗಿ ಕೂಗಿಕೊಂಡನು “ಫಲಹಾರದ ತಿಂಡಿಗಳನ್ನು ತೆಗೆದುಕೊಂಡು ಬಾ, ದೊಡ್ಡಮ್ಮ! ಬೇಗನೆ ತೆಗೆದುಕೊಂಡು ಬಾ, ಬಹಳ ಹಸಿವೆಯಾಗಿದೆ. ಆದರೆ ಮಾತ್ರ, ಮಿಠಾಯಿ ಯನ್ನು ಕಡಿಮೆಯಾಗಿ ಕೊಟ್ಟರೆ ಸುಮ್ಮನಿರುವುದಿಲ್ಲ, ತಿಳಿದೆಯೊ?”

ಗಂಗಾಮಣಿಯು ಹಸುವನ್ನು ಕಟ್ಟುವುದಕ್ಕೆಂದು ದನದ ಕೊಟ್ಟಿಗೆಗೆ ಹೋಗಿದ್ದಳು. ಗಯಾರಾಮನ ಕೂಗಾಟವನ್ನು ಕೇಳಿ, ಅವಳು ತಾನು ಮಾಡಿದ ಕೆಲಸ ತಪ್ಪೆಂದು ತಿಳಿದುಕೊಂಡಳು. ಮನೆಯಲ್ಲಿ ಹಾಲು-ಮೊಸರು ಮತ್ತು ಪುರಿಯೇನೋ ಇದ್ದಿತು; ಆದರೆ ಬಾಳೆಯ ಹಣ್ಣು-ಮಿಠಾಯಿಗಳೇ ಇರಲಿಲ್ಲ. ಗಯಾರಾಮನನ್ನು ಆಗ ಸಮಾಧಾನ ಪಡಿಸುವುದಕ್ಕಾಗಿ ಆಸೆ ಯನ್ನೇನೋ ತೋರಿಸಿಬಿಟ್ಟಳು; ಆದರೆ ಈಗ ಏನು ಮಾಡುವಳು? ಪಾಪ!

ಅವಳು ದನದ ಕೊಟ್ಟಿಗೆಯಿಂದಲೇ ಉತ್ತರವಿತ್ತಳು “ನೀನು ಬಟ್ಟೆ ಬದಲಾಯಿಸಿಕೊಂಡು ಬಾ; ಅಷ್ಟರಲ್ಲಿ ನಾನು ಕೈಕಾಲು ತೊಳೆದುಕೊಂಡು ಬರುವೆನು.”

" ಬೇಗನೆ ಬಾ! " ಎಂದು ಹೇಳಿ ಗಯಾರಾಮನು ಬಟ್ಟೆ ಬದಲಾಯಿಸಿಕೊಂಡು ಬಂದನು. ಮತ್ತು ತಾನೇ ಮಣೆಯನ್ನು ಹಾಕಿಕೊಂಡು, ಲೋಟದಲ್ಲಿ ನೀರಿಟ್ಟುಕೊಂಡು, ಸಿದ್ಧನಾಗಿ ಕುಳಿತನು. ಗಂಗಾಮಣಿಯು ಬೇಗಬೇಗನೆ ಕೈಕಾಲು ತೊಳೆದುಕೊಂಡು ಓಡಿಬಂದಳು, ಮತ್ತು ಅವನು ಪ್ರಸನ್ನ ಚಿತ್ತನಾಗಿರುವುದನ್ನು ಕಂಡು, ನಗುತ್ತ ನುಡಿದಳು— " ನೋಡಿದೆಯಾ, ಈಗ ಎಂತಹ ರಾಜ ಹುಡುಗನಂತಿರುವೆ? ಮಾತು-ಮಾತಿಗೂ ಕೋಪ ಮಾಡಿಕೊಳ್ಳುವರೇ? " ಎನ್ನುತ್ತ ಉಗ್ರಾಣದ ಮನೆಯಿಂದ ಫಲಹಾರದ ಸಾಮಾನುಗಳನ್ನು ತಂದಳು.

ಗಯಾರಾಮನು ಕ್ಷಣದಲ್ಲೇ ಎಲ್ಲಾ ಸಾಮಾನುಗಳನ್ನೂ ನೋಡಿದನು ಮತ್ತು ತೀವ್ರ ಧ್ವನಿಯಿಂದ ' ಬಾಳೆಯ ಹಣ್ಣುಗಳೆಲ್ಲಿ? " ಎಂದು ಗರ್ಜಿಸಿದನು.

ಗಂಗಾಮಣಿಯು ಅತ್ತಿತ್ತ ನೋಡಿ, ಹೆದರುತ್ತ ನುಡಿದಳು— " ಮುಚ್ಚಳ ಮುಚ್ಚುವುದನ್ನು ಮರೆತುಬಿಟ್ಟಿದ್ದೆ. ಮಗೂ! ಎಲ್ಲವನ್ನೂ ಇಲಿ ತಿಂದು ಬಿಟ್ಟಿದೆ! ಇನ್ನು ಮೇಲೆ ಒಂದು ಬೆಕ್ಕನ್ನು ಸಾಕಿದ ಹೊರತು ನಿರ್ವಾಹವಾಗುವಂತಿಲ್ಲ! "

" ಇಲಿಯು ಎಲ್ಲಾದರೂ ಬಾಳೆಯ ಹಣ್ಣನ್ನು ತಿನ್ನುವುದೇ? ನಿನ್ನ ಹತ್ತಿರ ಇರಲಿಲ್ಲವೆಂದು ಏಕೆ ಹೇಳುವುದಿಲ್ಲ? "

ಗಂಗಾಮಣಿಯು ಆಶ್ಚರ್ಯದಿಂದ ನೋಡಿದಳು—" ಏಕೆ? ಇಲಿಯು ಬಾಳೆಯ ಹಣ್ಣನ್ನು ತಿನ್ನುವುದಿಲ್ಲವೇ? "

ಗಯಾರಾಮನು ಮೊಸರಿನಲ್ಲಿ ಪುರಿಯನ್ನು ಕಲೆಸಿಕೊಳ್ಳುತ್ತ— " ಹೌದು ಹೌದು, ತಿನ್ನುತ್ತದೆ! ಹೋಗಲಿ, ನನಗೆ ಬಾಳೆಯ ಹಣ್ಣು ಬೇಡ ಮಿಠಾಯಿ ತೆಗೆದುಕೊಂಡು ಬಾ! ಕಡಿಮೆಯಾಗಿ ತಂದೆಯಾದರೆ ಖಂಡಿತವಾಗಿಯೂ ಸುಮ್ಮನಿರುವುದಿಲ್ಲ, ಹೇಳಿಬಿಟ್ಟಿರುವೆನು! "

ಗಂಗಾಮಣಿಯು ಪುನಃ ಉಗ್ರಾಣದ ಮನೆಗೆ ಹೋದಳು, ಮತ್ತು ಸುಳ್ಳು ಸುಳ್ಳೇ ಸ್ವಲ್ಪ ಹೊತ್ತು ಮಡಕೆ-ಪಾತ್ರೆಗಳನ್ನು ಅಲ್ಲಿಂದಿಲ್ಲಿ ಎತ್ತಿರಿಸಿ, ಹುಡುಕಿದಂತೆ ನಟಿಸುತ್ತ, ಹೆದರಿಕೆಯನ್ನು ಸೂಚಿಸುತ್ತ ನುಡಿದಳು— " ಅಯ್ಯೋ! ಮಿಠಾಯಿಯನ್ನೂ ಇಲಿ ತಿಂದುಬಿಟ್ಟಿದೆ, ಮಗೂ! ಸ್ವಲ್ಪವಾದರೂ ಉಳಿಸಿಲ್ಲ! ಅದಕ್ಕೂ ಮುಚ್ಚಳ ಮುಚ್ಚಲು ಮರೆತು ಬಿಟ್ಟೆ

ನೆಂದು ತೋರುತ್ತದೆ? ಹಾಳಾದ ನನ್ನ ಮರೆವಿಗೆ ಏನು ಮಾಡಿದರೂ ತೀರದು!"

ದೊಡ್ಡಮ್ಮನಿಗೆ ಮಾತು ಮುಗಿಸುವುದಕ್ಕೆ ಸಹ ಸಮಯ ಕೊಡದೆ, ಹುಬ್ಬುಗಳನ್ನು ಗಂಟಿಕ್ಕಿ ಗಯಾರಾಮನು ಕ್ರೋಧದಿಂದ ನುಡಿದನು— 'ಮಿಠಾಯಿಯನ್ನು ಸಹ ಇಲಿ ತಿನ್ನುವುದೇ ಪಾಪಿ? ನನ್ನ ಸಂಗಡ ಈ ಸುಳ್ಳು-ಪೊಳ್ಳು ವಿದ್ಯೆಗಳನ್ನು ತೋರುತ್ತಿರುವೆಯಾ? ನಿನ್ನ ಹತ್ತಿರ ಏನೂ ತಿಂಡಿ ಇಲ್ಲದ ಬಳಿಕ, ಫಲಹಾರಕ್ಕೆ ನನ್ನನ್ನೇಕೆ ಕೂಗಿದೆ?

ದೊಡ್ಡಮ್ಮನು ಉಗ್ರಾಣದಿಂದ ಹೊರಕ್ಕೆ ಬಂದು "ಸತ್ಯವಾಗಿಯೂ ಹೇಳುತ್ತಿರುವೆನು ಗಯಾ—!" ಎಂದಳು.

ಗಯಾರಾಮನು ತಿನ್ನುತ್ತಿದ್ದುದನ್ನು ಬಿಟ್ಟು, ಎಗರಾಡುತ್ತ ಎದ್ದು ನಿಂತನು ಮತ್ತು ನುಡಿದನು— "ಇಷ್ಟಾದರೂ, ಇನ್ನೂ 'ಸತ್ಯವಾಗಿ' ಎಂದು ಹೇಳುತ್ತಿರುವೆಯಾ? ಹೋಗು! ನಾನು ನಿನ್ನ ಬಳಿ ಏನನ್ನೂ ತಿನ್ನುವುದಿಲ್ಲ!" ಎಂದು ತಟ್ಟೆಯಲ್ಲಿದ್ದ ಸಾಮಾನೆಲ್ಲವನ್ನೂ ಕಾಲಿನಿಂದ ಅಂಗಳಕ್ಕೆ ಒದ್ದುಬಿಟ್ಟನು. 'ಆಗಲಿ! ನಿನಗೆ ಸರಿಯಾದ ಕೆಲಸ ಕೊಡು ವೆನು, ನೋಡು!" ಎನ್ನುತ್ತ ಒಂದು ದೊಡ್ಡ ಕೋಲನ್ನು ತೆಗೆದುಕೊಂಡು ಉಗ್ರಾಣದ ಕಡೆ ನುಗ್ಗಿದನು.

ಬೇಡ ಬೇಡವೆನ್ನುತ್ತ ಗಂಗಾಮಣಿಯು ಅವನ ಹಿಂದೆಯೇ ಓಡಿ ಬಂದಳು. ಆದರೆ ಅಷ್ಟರಲ್ಲೇ ಕ್ರುದ್ಧ ಗಯಾರಾಮನು ಮಡಿಕೆಗಳೆಲ್ಲ ವನ್ನೂ ಒಡೆದು ಸಂಪೂರ್ಣ ಮಾಡಿ ಬಿಟ್ಟಿದ್ದನು. ಅವನನ್ನು ತಡೆಯಲು ಹೋದದ್ದರಿಂದ ಗಂಗಾಮಣಿಯ ಕೈಗಳ ಮೇಲೂ ಸ್ವಲ್ಪ ಗಾಯ-ವಾಯಿತು.

ಅದೇ ಹೊತ್ತಿಗೆ ಸರಿಯಾಗಿ ಶಿವನು ಜಮೀನ್‌ದಾರರ ಮನೆಯಿಂದ ಹಿಂತಿರುಗಿದನು. ಗಲಾಟೆಯನ್ನು ಕೇಳಿ, ಅವನು ವಿಷಯವೇನೆಂದು ವಿಚಾರಿಸಿದನು. ಗಂಗಾಮಣಿಯು ಪತಿಯ ಧ್ವನಿಯನ್ನು ಕೇಳುತ್ತಲೇ ಅಳತೊಡಗಿದಳು; ಗಯಾರಾಮನು ಕೈಯಲ್ಲಿದ್ದ ಕೋಲನ್ನು ಅಲ್ಲೇ ಬಿಟ್ಟು ಕಾಲಿಗೆ ಬುದ್ಧಿ ಹೇಳಿದನು.

ಶಿವನು ಕ್ರುದ್ಧ ಧ್ವನಿಯಿಂದ ಕೇಳಿದನು— "ಏಕೆ ಏನಾಯಿತು? ನಡೆದ ವಿಷಯವನ್ನು ತಿಳಿಸು!"

ಗಂಗಾಮಣಿಯು ಅಳುತ್ತ ಹೇಳಿದಳು— "ಗಯಾರಾಮನು ವಳ್ಳಿಯಲ್ಲಿದ್ದ ಮಡಿಕೆಗಳನ್ನೆಲ್ಲಾ ಒಡೆದು ಬಿಟ್ಟು, ನನ್ನ ಕೈಯ ಮೇಲೂ ಕೋಲಿನಿಂದ ಒಂದೇಟನ್ನು ಹೊಡೆದು ಓಡಿ ಹೋಗಿರುವನು. ಇದೋ ನೋಡಿ ಕೈ ಊದಿ ಹೋಗಿದೆ!" ಎನ್ನುತ್ತ ಪತಿಗೆ ತನ್ನ ಕೈಯನ್ನು ತೋರಿಸಿದಳು.

ಶಿವನ ಹಿಂದೆ ಅವನ ಚಿಕ್ಕ ಮೈದುನನಿದ್ದನು. ಓದು-ಬರಹ ತಿಳಿದವನೂ ಬುದ್ಧಿವಂತನೂ ಆದ್ದರಿಂದ, ಜಮೀನ್‌ದಾರರ ಮನೆಗೆ ಹೋಗುವಾಗ ಶಿವನು ಅವನನ್ನು ಸಂಗಡ ಕರೆದುಕೊಂಡು ಹೋಗಿದ್ದನು. ಅವನೆಂದನು—"ಸಾಮಂತ ಸಾಹೇಬರೇ! ಇದೆಲ್ಲವೂ ಚಿಕ್ಕ ಸಾಮಂತರ ಕೆಲಸ. ಹುಡುಗನನ್ನು ಕಳುಹಿಸಿ ಅವರೇ ಈ ಕೆಲಸ ಮಾಡಿಸಿರುವರು. ಅಲ್ಲವೇ ಅಕ್ಕ?"

ಗಂಗಾಮಣಿಯ ಹೃದಯವು ಆ ಹೊತ್ತಿನಲ್ಲಿ ಕ್ರೋಧದಿಂದ ಜ್ವಲಿಸುತ್ತಿತ್ತು. ಅವಳು ತಮ್ಮನ ಮಾತಿಗೆ ತಲೆತೂಗುತ್ತ "ಹೌದು ತಮ್ಮಾ! ನೀನು ಹೇಳಿದ್ದು ನಿಜ! ಆ ಹಾಳಾದವನೇ ಹುಡುಗನನ್ನು ಕಳುಹಿಸಿ, ನನಗೆ ಏಟು ಬೀಳುವಂತೆ ಮಾಡಿರುವನು! ಅವನಿಗೆ ತಕ್ಕ ಶಿಕ್ಷೆಯಾದ ಹೊರತು ನನ್ನ ಮನಸಿಗೆ ಸಮಾಧಾನವಿಲ್ಲ. ನೇಣು ಹಾಕಿಕೊಂಡು ಪ್ರಾಣ ಬಿಡಲೇ— ಎನಿಸುತ್ತಿದೆ!"

ಮಧ್ಯಾಹ್ನವಾಗಿ ಹೋಗಿತ್ತು. ಶಿವನಿಗೆ ಇನ್ನೂ ಸ್ನಾನ-ಊಟವಾಗಿರಲಿಲ್ಲ; ಜಮೀನ್‌ದಾರರ ಬಳಿಯಲ್ಲೂ ಸರಿಯಾದ ನ್ಯಾಯ ದೊರೆತಿರಲಿಲ್ಲ. ಸಾಲದುದಕ್ಕೆ ಮನೆಗೆ ಹೆಜ್ಜೆ ಇಟ್ಟ ಕೂಡಲೇ ಈ ಕಾಂಡ! ಅವನು ಮಿತಿಮೀರಿದ ಕ್ರೋಧದಿಂದ ಹಿತಾಹಿತ ಜ್ಞಾನ ಶೂನ್ಯನಾದನು. "ಇದೋ, ಈ ಕ್ಷಣವೇ ಪೋಲೀಸ್ ಠಾಣೆಗೆ ಹೋಗುವೆನು. ಅವನ ನೀಚ ಕೃತ್ಯಕ್ಕೆ ತಕ್ಕ ಶಿಕ್ಷೆಯನ್ನು ಮಾಡಿಸದಿದ್ದರೆ, ನಾನು ವೃಂದಾವನ ಸಾಮಂತರ ಮಗನಲ್ಲ!" ಎಂದು ಪ್ರತಿಜ್ಞೆ ಮಾಡಿದನು

ಅವನ ಮೈದುನನು ಓದು-ಬರಹ ತಿಳಿದವನು; ಅದೂ ಅಲ್ಲದೆ ಮೊದಲಿನಿಂದಲೂ ಅವನಿಗೆ ಗಯಾರಾಮನನ್ನು ಕಂಡರೆ ಆಗುತ್ತಿರಲಿಲ್ಲ. ಅವನೆಂದನು— "ಕಾನೂನಿನ ಮೇರೆಗೆ ಇದು ಅನಧಿಕಾರ ಪ್ರವೇಶವೇ ಹೌದು! ಲಾಠಿಯನ್ನು ತೆಗೆದುಕೊಂಡು ಇನ್ನೊಬ್ಬರ ಮನೆಗೆ ನುಗ್ಗುವುದು

ಒಳಗಿರುವ ಸಾಮಾನುಗಳನ್ನೆಲ್ಲಾ ಒಡೆಯುವುದು, ಸ್ತ್ರೀಯರ ಮೇಲೆ ಕೈಮಾಡುವುದು— ಇದಕ್ಕೆ ಶಿಕ್ಷೆ ಏನು ಗೊತ್ತೇ? ಆರು ತಿಂಗಳ ಸಜಾ! ಸಾಮಂತ ಸಾಹೇಬರೇ, ನೀವು ಮನಸ್ಸು ಮಾಡಿ ಸಿದ್ಧರಾಗಿ ನಂತರ ತಂದೆ-ಮಕ್ಕಳಿಬ್ಬರೂ ಹೇಗೆ ಜೈಲಿಗೆಳೆಯಲ್ಪಡುವರೆಂಬುದನ್ನು ನಾನು ತೋರಿಸಿ ಕೊಡುವೆನು!''

ಮೈದುನನ ಈ ಮಾತನ್ನು ಕೇಳಿ, ಶಿವನು ಬೇರೆ ಏನೂ ಯೋಚನೆ ಮಾಡದೆ, ಅವನನ್ನು ಸಂಗಡ ಕರೆದುಕೊಂಡು ನೆಟ್ಟಗೆ ಠಾಣೆಗೆ ಹೊರಟನು.

ಗಂಗಾಮಣಿಗೆ ಹೆಚ್ಚಾದ ಕೋಪವಿದ್ದುದು ಮೈದುನ ಮತ್ತು ಜರಗಿತ್ತಿಯ ಮೇಲೆ! ಅವಳು ಈ ಸಣ್ಣ ವಿಷಯವನ್ನೇ ಒಂದು ಭಾರಿಯ ಜಗಳವನ್ನಾಗಿ ಮಾಡಬೇಕೆಂದು ಬಯಸಿ, ಮನೆಯ ಬಾಗಿಲನ್ನು ಮುಚ್ಚಿಕೊಂಡು, ಒಂದು ಉರಿಯುತ್ತಿರುವ ಕೊಳ್ಳಿಯನ್ನು ಕೈಯಲ್ಲಿ ಹಿಡಿದು ಶಂಭುವಿನ ಮನೆಯ ಅಂಗಳದಲ್ಲಿ ಬಂದು ನಿಂತಳು. ಮತ್ತು ಉಚ್ಚ-ಸ್ವರದಿಂದ ಕೂಗಿಕೊಂಡಳು— 'ಲಾಲಾ ಸಾಹೇಬರೇ! ಮಗನನ್ನು ಕಳುಹಿಸಿ ನನಗೆ ಏಟು ಬೀಳುವಂತೆ ಮಾಡಿರುವಿರಾ? ತತ್ಫಲವಾಗಿ ಈಗ ತಂದೆ-ಮಕ್ಕಳಿಬ್ಬರೂ ಜೈಲು ಶಿಕ್ಷೆಯನ್ನನುಭವಿಸಿರಿ!''

ಶಂಭುವು ಆಗ ತಾನೇ ತನ್ನ ಚಿಕ್ಕ ಮಗನೊಡನೆ ಊಟ ಮಾಡಿ ಕೈತೊಳೆದುಕೊಂಡು ನಿಂತಿದ್ದನು. ಅತ್ತಿಗೆಯ ಈ ಕ್ರೋಧಮೂರ್ತಿಯನ್ನೂ, ಅವಳ ಕೈಯಲ್ಲಿದ್ದ ಉರಿಯುತ್ತಿರುವ ಕೊಳ್ಳಿಯನ್ನೂ ನೋಡಿ ಶಂಭುವಿಗೆ ದಿಕ್ಕು ತೋರದಂತಾಯಿತು. "ಏಕೆ? ಏನಾಯಿತು? ನನಗೇನೂ ಗೊತ್ತಿಲ್ಲವಲ್ಲಾ?'' ಎಂದನು.

ಗಂಗಾಮಣಿಯು ಮುಖವನ್ನು ತಿರುಗಿಸುತ್ತ ಉತ್ತರವಿತ್ತಳು— "ಹೆಚ್ಚಾಗಿ ಕೂಗಿಕೊಳ್ಳಬೇಡಿ, ಸಾಕು! ಪೋಲೀಸಿನವರು ಬರುತ್ತಿರುವರು; ಅವರ ಮುಂದೆ ನಿಮಗೇನೂ ಗೊತ್ತಿಲ್ಲವೆಂದು ಹೇಳಿ!''

ಶಂಭುವಿನ ಪತ್ನಿಯೂ ಗಾಬರಿಯಿಂದ ಹೊರಕ್ಕೆ ಓಡಿಬಂದು ಒಂದು ಕಂಬವನ್ನು ಹಿಡಿದುಕೊಂಡು ಸುಮ್ಮನೆ ನಿಂತುಬಿಟ್ಟಳು ಶಂಭುವು ಮನಸ್ಸಿನಲ್ಲೇ ಹೆದರಿದನು. ಅವನು ಅತ್ತಿಗೆಯ ಸಮೀಪಕ್ಕೆ ಬಂದು

ವಿನಯದಿಂದ ನುಡಿದನು—'' ಪ್ರಮಾಣವಾಗಿಯೂ ಹೇಳುವೆನು ಅತ್ತಿಗೆ! ನಮಗೇನೂ ಗೊತ್ತಿಲ್ಲ ! ''

ಅವನು ಹೇಳುತ್ತಿರುವುದು ನಿಜವೆಂದು ಗಂಗಾಮಣಿಗೂ ಗೊತ್ತಿತ್ತು; ಆದರೆ ಆಗ ಉದಾರತೆಯ ಸಮಯವಾಗಿರಲಿಲ್ಲ. ಅವಳು ಶಂಭುವಿನ ಮೇಲೆ ಸಾಕಷ್ಟು ದೋಷ ಹೊರಿಸಿ, ಗಯಾರಾಮನು ಮಾಡಿದ ಕೆಲಸವೆಲ್ಲವನ್ನೂ ಇನ್ನಷ್ಟು ಸುಳ್ಳು-ಪೊಳ್ಳು ಸೇರಿಸಿ ವರ್ಣಿಸಿದಳು. ಗಯಾರಾಮನನ್ನು ನೋಡಿದವರಾರೇ ಆಗಲಿ ಈ ಘಟನೆಯನ್ನು ನಂಬದೇ ಇರುವಂತಿರಲಿಲ್ಲ !

ಸ್ವಲ್ಪ ಭಾಷಿಣಿಯಾದ ಚಿಕ್ಕ ಸೊಸೆಯು ಪತಿಯೊಡನೆ ಹೇಳಿದಳು-- '' ನಾನು ಹೇಳುತ್ತಿದ್ದಂತೆಯೇ ಆಯಿತು ! ಎಷ್ಟು ದಿನಗಳಿಂದ ಹೇಳುತ್ತಿರುವೆನು, ಆ ಘಾತಕನನ್ನು ಮನೆಗೆ ಸೇರಿಸಬೇಡಿರೆಂದು ? ಎಂದಾದರೊಂದು ದಿನ ಅವನು ನಿಮ್ಮ ಚಿಕ್ಕ ಮಗನನ್ನೂ ಹೊಡೆದು, ಖೂನಿ ಮಾಡಿಬಿಡುವನು ! ನಾನು ಹೇಳುವ ವಿಷಯವನ್ನು ನೀವು ಗಮನಕ್ಕೆ ತಂದುಕೊಳ್ಳುವುದಿಲ್ಲ; ಈಗಲಾದರೂ ನನ್ನ ಮಾತಿನಲ್ಲಿ ನಂಬಿಕೆಯುಂಟಾಯಿತೇ ?

ಶಂಭುವು ಅತಿ ವಿನಯದಿಂದ ಗಂಗಾಮಣಿಯನ್ನು ಕೇಳಿದನು— ನನ್ನಾಣೆಗೂ ಹೇಳಿ, ಅತ್ತಿಗೆ ! ಅಣ್ಣನು ಖಂಡಿತವಾಗಿಯೂ ಠಾಣೆಗೆ ಹೋದನೇ ?

ಮೈದುನನ ಕರುಣ ಧ್ವನಿಯಿಂದ ಸ್ವಲ್ಪ ಶಾಂತಳಾಗಿ ಗಂಗಾಮಣಿಯು ನುಡಿದಳು—'' ಹೌದು ಲಾಲಾಜೀ ! ನಿಮ್ಮಾಣೆಗೂ ಹೋಗಿರುವರು ! ಸಂಗಡ ನಮ್ಮ ಪಂಚುವೂ ಹೋಗಿರುವನು.

ಶಂಭುವು ನಿಜವಾಗಿಯೂ ಬಹಳ ಹೆದರಿದನು. ಚಿಕ್ಕ ಸೊಸೆಯು ಗಂಗಾಮಣಿಯೊಡನೆ ಹೇಳಿದಳು— ' ನಾನು ಪ್ರತಿ ನಿತ್ಯವೂ ಇವರಿಗೆ ಹೇಳುತ್ತಿರುವೆನು, ಅಕ್ಕ ! ನದಿಯ ಅತ್ತ ಕಡೆ ಸರ್ಕಾರಿ ಸೇತುವೆಯನ್ನು ಕಟ್ಟುತ್ತಿರುವರಂತೆ; ಅಲ್ಲಿ ಎಷ್ಟೋ ಮಂದಿಯನ್ನು ಕೆಲಸಕ್ಕೆ ತೆಗೆದುಕೊಳ್ಳುವರು. ಅಲ್ಲಿಯೇ ಇವನನ್ನೂ ಯಾವುದಾದರೊಂದು ಕೆಲಸಕ್ಕೆ ಸೇರಿಸಬಾರದೇ ? ಅವರಾದರೆ ಅವನಿಂದ ಹೊಡೆದು ಕೆಲಸ ತೆಗೆದುಕೊಳ್ಳುವರು- ಎಲ್ಲಿಗೂ ಓಡಿ ಹೋಗಲು ಆಸ್ಪದವಿರುವುದಿಲ್ಲ; ಎರಡು ದಿನಗಳಲ್ಲೇ ಬುದ್ಧಿ ಕಲಿತುಕೊಳ್ಳುವನು ! ಅದೆಲ್ಲಾ ಮಾಡದೆ ಅವನನ್ನು ಓದುವುದಕ್ಕೆ ಸ್ಕೂಲಿಗೆ

ಕಳುಹಿಸುತ್ತಿರುವರು. ಓದಿ ಓದಿ, ವಕಾಲತ್ ಪರೀಕ್ಷೆ ಪಾಸು ಮಾಡುವ ನೆಂದು ತಿಳಿದಿರುವರು ? ”

ಶಂಭುವು ಕಾತರ ಕಂಠದಿಂದ ನುಡಿದನು— “ ಅರೆ! ಅಲ್ಲಿಗೆ ಅವನನ್ನು ನಾನೇಕೆ ಕಳುಹಿಸಲಿಲ್ಲವೆಂದು ನಿನಗೇನು ಗೊತ್ತು ? ಅಲ್ಲಿಗೆ ಹೋದವರೆಲ್ಲರೂ ಮನೆಗೆ ಹಿಂತಿರುಗುವರೆಂದು ತಿಳಿದೆಯಾ? ಅಲ್ಲಿಗೆ ಹೋದ ಅರ್ಧ ಮಂದಿಯೆಲ್ಲಾ ಮಣ್ಣಿನಲ್ಲಿ ಹೂತು ಸತ್ತು ಹೊಗುವರು ! ”

“ ಹಾಗಿದ್ದರೆ ತಂದೆ-ಮಕ್ಕಳಿಬ್ಬರೂ ಹೋಗಿ ಜೈಲು ಶಿಕ್ಷೆಯನ್ನನು ಭವಿಸಿರಿ ! ” ಎಂದಳು ಚಿಕ್ಕ ಸೊಸೆ.

ಗಂಗಾಮಣಿಯು ಸುಮ್ಮನಿದ್ದಳು. ಶಂಭುವು ಅತಿ ವಿನಯದಿಂದ ಅವಳನ್ನು ಕೇಳಿಕೊಂಡನು— “ ಅತ್ತಿಗೆ ! ನಾನು ನಾಳೆಯೇ ಹುಡುಗ ನನ್ನು ಸೇತುವೆಯಲ್ಲಿ ಕೆಲಸಕ್ಕೆ ಸೇರಿಸಿಬಿಡುವೆನು ! ದಯವಿಟ್ಟು ಅಣ್ಣ ನನ್ನು ಸ್ವಲ್ಪ ಸಮಾಧಾನ ಮಾಡಿರಿ ! ಇನ್ನು ಮುಂದೆ ಇಂತಹ ಕೆಲಸ ವಾಗಲು ಆಸ್ಪದ ಕೊಡುವುದಿಲ್ಲ ! ”

ಚಿಕ್ಕ ಸೊಸೆಯೆಂದಳು— ‘ ಯಾವುದೊಂದು ಜಗಳವೂ ಈ ಹಾಳಾದ ಹುಡುಗನಿಂದಲೇ ಆಗುವುದು ! ಅವನನ್ನು ಮನೆಗೆ ಸೇರಿಸ ಬೇಡಿ, ಹೆಚ್ಚಾಗಿ ತಲೆಗೇರಿಸಿಕೊಳ್ಳಬೇಡಿ— ಎಂದು ನಿಮ್ಮೊಡನೆ ಸಹ ಎಷ್ಟೋ ಬಾರಿ ಹೇಳಿರುವೆನು ಅಕ್ಕ ! ನಾನು ನಿಮ್ಮೊಡನೆ ಅವನು ಮಾಡುವ ಯಾವ ಕೆಲಸವನ್ನೂ ಹೇಳುವುದಿಲ್ಲ ? ಹೋದ ತಿಂಗಳು ನಿಮ್ಮ ಮನೆಯಿಂದ, ರಾತ್ರಿಯ ಹೊತ್ತಿನಲ್ಲಿ ಬಾಳೆಯ ಗೊನೆಯನ್ನು ಕಡಿದು ತಂದವರಾರು ? ಅದೆಲ್ಲವೂ ಈ ಡಕಾಯಿತನ ಕೆಲಸವೇ ! ನಾಯಿಗೆ ತಕ್ಕ ದೊಣ್ಣೆ ಇದ್ದ ಹೊರತು ಕೆಲಸವಾಗುವುದಿಲ್ಲ ! ಸೇತುವೆಯಲ್ಲಿ ಕೆಲಸಕ್ಕೆ ಸೇರಿಸಿಬಿಟ್ಟರೆ ಎಷ್ಟೋ ಸುಭಿಕ್ಷವಾಗುವುದು. ”

ನಾಳೆಯ ದಿನ ಹೇಗಾದರೂ ಮಾಡಿ ಹುಡುಗನನ್ನು ಊರಿನಿಂದ ಹೊರಗೆ ಕಳುಹಿಸಿದ ಹೊರತು, ಜಲಪಾನ ಸಹ ಮಾಡುವುದಿಲ್ಲವೆಂದು ಶಂಭುವು ಪ್ರತಿಜ್ಞೆ ಮಾಡಿದನು

ಇಷ್ಟಾದರೂ ಗಂಗಾಮಣಿಯು ಒಂದು ಮಾತನ್ನೂ ಆಡಲಿಲ್ಲ. ಕೈಯಲ್ಲಿದ್ದ ಕೊಳ್ಳಿಯನ್ನು ಬಿಸುಟಿ, ಸುಮ್ಮನೆ ಮನೆಗೆ ಹೊರಟು ಹೋದಳು.

ಪತಿಯಾಗಲಿ, ತಮ್ಮನಾಗಲಿ, ತಾನಾಗಲಿ ಯಾರೂ ಇದುವರೆಗೂ ಒಂದು ತೊಟ್ಟು ನೀರನ್ನು ಸಹ ಕುಡಿದಿರಲಿಲ್ಲ. ಆದ್ದರಿಂದ ಗಂಗಾ-ಮಣಿಯು ಆ ಮಧ್ಯಾಹ್ನದಲ್ಲಿ, ವಿಷಣ್ಣ-ವದನದಿಂದ, ಅಡಿಗೆಗೆ ಸಿದ್ಧ ಮಾಡಿಕೊಳ್ಳುತ್ತಿದ್ದಳು; ಅಷ್ಟರಲ್ಲಿ ಗಯಾರಾಮನು ಹೆದರುತ್ತ ಹೆದರುತ್ತ ಒಳಗೆ ಬಂದನು. ಮನೆಯಲ್ಲಿ ಮತ್ತಾರೂ ಇಲ್ಲವೆಂಬುದನ್ನು ತಿಳಿದು ಕೊಂಡು ಅವನಿಗೆ ಸ್ವಲ್ಪ ಸಾಹಸವುಂಟಾಯಿತು "ದೊಡ್ಡಮ್ಮ!" ಎಂದನು.

ಗಂಗಾಮಣಿಯು ಬೆಚ್ಚಿಬಿದ್ದಳು; ಆದರೆ ಮಾತನಾಡಲಿಲ್ಲ. ಗಯಾ ರಾಮನು ಅವಳ ಪಕ್ಕಕ್ಕೇ ಬಂದು, ಆಯಾಸದಿಂದ ದೊಪ್ಪನೆ ಕುಳಿತು ಬಿಟ್ಟನು. "ಒಳಗೆ ಏನಿದೆಯೋ ಅದನ್ನೇ ಕೊಡು, ದೊಡ್ಡಮ್ಮ! ಬಹಳ ಹಸಿವೆಯಾಗುತ್ತಿದೆ." ಎಂದನು.

ತಿಂಡಿಯ ಮಾತನ್ನು ಕೇಳಿ ಗಂಗಾಮಣಿಯ ಶಾಂತವಾಗಿದ್ದ ಕ್ರೋಧವು ಪುನಃ ಪ್ರಜ್ವಲಿಸತೊಡಗಿತು. ಅವಳು ಗಯಾರಾಮನ ಕಡೆ ತಿರುಗಿ ನೋಡದೆಯೇ ಕ್ರೋಧದಿಂದ ನುಡಿದಳು— "ನೀಚ! ನಾಚಿಕೆ ಯಾಗುವುದಿಲ್ಲವೇ ನಿನಗೆ? ಪುನಃ ನನ್ನ ಬಳಿಗೆ ಬಂದೆಯಾ? ಹಸಿವೆ ಯಾಗುತ್ತಿದೆಯಂತೆ! ನಡೆ, ಇಲ್ಲಿಂದ ಹೊರಟು ಹೋಗು!"

"ಹಾಗಿದ್ದರೆ ನೀನು ಹೇಳಿದೆಯೆಂದು ನಾನು ಹೊರಟು ಹೋಗಲೇ?' ಎಂದನು ಗಯಾರಾಮ

ದೊಡ್ಡಮ್ಮನು ಮತ್ತೆ ಗದರಿ ನುಡಿದಳು— "ನೀಚ! ದ್ರೋಹಿ! ಈಗ ನಿನಗೆ ಊಟಕ್ಕಿಡುವೆನೆಂದು ತಿಳಿದೆಯಾ?"

"ನೀನಲ್ಲದೆ ಮತ್ತಾರು ನನಗೆ ಊಟಕ್ಕಿಡುವರು? ನೀನು ಇಲಿಯ ಹೆಸರನ್ನು ಹೇಳಿ, ಸುಳ್ಳು ಮಾತನ್ನೇಕಾಡಿದೆ? ಈ ದಿವಸ ಬೇರೆ ಏನೂ ಇಲ್ಲ ಮಗೂ! ಇದನ್ನೇ ತಿಂದು ಸುಮ್ಮನಿರು!— ಎಂದು ಒಳ್ಳೆಯ ಮಾತಿ ನಿಂದ ಏಕೆ ಹೇಳಲಿಲ್ಲ? ಹಾಗೆ ಹೇಳಿದ್ದರೆ ನನಗೆ ಕೋಪವೇತಕ್ಕೆ ಬರು ತ್ತಿತ್ತು? ಬೇಗನೆ ಏನಾದರೂ ತಿನ್ನುವುದಕ್ಕೆ ಕೊಡು; ಹೊಟ್ಟೆಯು ಹಸಿವೆ ಯಿಂದ ಸುಟ್ಟು ಹೋಗುತ್ತಲಿದೆ!"

ಗಂಗಾಮಣಿಯು ತುಸು ಹೊತ್ತು ಮೌನದಿಂದಿದ್ದು, ಮನಸ್ಸಿನಲ್ಲೇ ಸ್ವಲ್ಪ ಶಾಂತಳಾಗಿ ನುಡಿದಳು— “ಹೊಟ್ಟೆಯು ಹಸಿವೆಯಿಂದ ಸುಡುತ್ತಿದೆಯಂತೆ, ನೀಚ! ಹೋಗು ನಿನ್ನ ವಿಮಾತೆಯ ಬಳಿಗೆ!”

ವಿಮಾತೆಯ ಹೆಸರನ್ನು ಕೇಳುತ್ತಲೇ ಅವನು ಕ್ರೋಧದಿಂದ ಕೆಂಡದಂತಾದನು. “ಆ ಅಭಾಗಿನಿಯ ಮುಖವನ್ನು ಇನ್ನು ನೋಡುವೆನೆಂದು ತಿಳಿದೆಯಾ? ನಾನು ಅಲ್ಲಿಗೆ ಮೀನು ಹಿಡಿಯುವ ಮುಳ್ಳನ್ನು ಕೇಳಲು ಹೋಗಿದ್ದಾಗ ‘ನಡೆ, ನಡೆ, ಜೈಲಿನ ಅನ್ನವನ್ನು ತಿನ್ನಲು ಹೋಗು!’ ಎಂದು ಗದರಿದಳು. ಅದಕ್ಕೆ ನಾನೆಂದೆ— ‘ನಿನ್ನ ಅನ್ನವನ್ನು ತಿನ್ನಲು ನಾನು ಬಂದಿಲ್ಲ; ಹೋಗುವೆನು ದೊಡ್ಡಮ್ಮನ ಬಳಿಗೆ!’ ಸುಟ್ಟ ಮೋರೆಯ ಪಿಶಾಚಿಯ ಮಾತನ್ನು ಕೇಳಿದೆಯಾ? ಅವಳೇ ಅಪ್ಪನ ಸಂಗಡ ಇಲ್ಲದ-ಸಲ್ಲದ ಮಾತನ್ನು ಒಂದಕ್ಕೆ ಹತ್ತಾಗಿ ಹೇಳಿರುವುದು? ಅದರಿಂದಲೇ ಅಲ್ಲವೇ ಅಪ್ಪನು ನಿನ್ನ ಕೈಯಿಂದ ಬಿದಿರೆಲೆಯನ್ನು ಕಿತ್ತುಕೊಂಡದ್ದು?” ಎಂದನು ನಂತರ ನೆಲದ ಮೇಲೆ ಕಾಲುಗಳನ್ನು ಜೋರಾಗಿ ಅಪ್ಪಳಿಸುತ್ತ ಕ್ರೋಧದಿಂದ ಹೇಳಿದನು— “ನೀನಾದರೂ ಬಿದಿರೆಲೆಯನ್ನು ತರುವುದಕ್ಕೆ ಒಬ್ಬಳೇ ಏಕೆ ಹೋದೆ? ಅನ್ಯಾಯವಾಗಿ ನಿನ್ನ ಕೈಯಾರೆ ನಿನ್ನ ಮರ್ಯಾದೆಯನ್ನು ಕಳೆದುಕೊಂಡೆ! ನನ್ನ ಸಂಗಡ ಏಕೆ ಹೇಳಲಿಲ್ಲ? ಆ ಬಿದಿರುಗಿಡಕ್ಕೆ ಬೆಂಕಿ ಹಚ್ಚಿ, ಸುಟ್ಟು ಭಸ್ಮ ಮಾಡದೆ ಹೋದರೆ ನನ್ನ ಹೆಸರು ಗಯಾರಾಮನಲ್ಲ! ಆ ಅಭಾಗಿನಿಯು ನನಗೇನು ಹೇಳಿದಳು ಗೊತ್ತೇ? ‘ನಿಮ್ಮ ದೊಡ್ಡಮ್ಮನು ಪೋಲೀಸ್ ಠಾಣೆಗೆ ವಿಷಯವನ್ನು ತಿಳಿಸಿರುವಳು. ಪೋಲೀಸಿನವರು ಬಂದು ನಿನ್ನನ್ನು ಹಿಡಿದೆಳೆದು ಠಾಣೆಗೊಯ್ಯುವರು— ಜೈಲು ಶಿಕ್ಷೆಯನ್ನನುಭವಿಸು!’ ಎಂದಳು. ಕೇಳಿದೆಯಾ ಅಭಾಗಿನಿಯ ಮಾತನ್ನು?”

“ನಿಮ್ಮ ದೊಡ್ಡಪ್ಪ ನಿಜವಾಗಿಯೂ ಪೋಲೀಸ್ ಠಾಣೆಗೆ ಹೋಗಿರುವರು; ಪಂಚುವೂ ಸಂಗಡ ಹೋಗಿರುವನು. ನನ್ನ ಮೇಲೆ ಕೈ ಮಾಡುವೆಯಾ? ನಿನಗೆಷ್ಟು ಸಾಹಸ?” ಎಂದಳು ಗಂಗಾಮಣಿ.

ಪಂಚೂ ಮಾಮನನ್ನು ಕಂಡರೆ ಗಯಾರಾಮನಿಗೆ ಆಗುತ್ತಿರಲಿಲ್ಲ. ಅವನೂ ಈ ಕೆಲಸದಲ್ಲಿ ಸಹಕಾರಿಯಾಗಿರುವನೆಂಬುದನ್ನು ಕೇಳಿ ಕ್ರೋಧ

ದಿಂದ ಅವನ ಮೈ ಬೆಂಕಿಯಾಯಿತು. "ಕೋಪ ಬಂದಿದ್ದ ಹೊತ್ತಿನಲ್ಲಿ, ನೀನು ನನ್ನನ್ನೇಕೆ ತಡೆಯಲು ಬಂದೆ ?"

"ಅದಕ್ಕಾಗಿ ನೀನು ನನ್ನನ್ನು ಹೊಡೆದೆಯಾ? ಆಗಲಿ! ಈಗ ನಡೆ, ಜೈಲಿನ ಸುಖವನ್ನನುಭವಿಸು!" ಎಂದಳು ಗಂಗಾಮಣಿ.

ಗಯಾರಾಮನು ದೊಡ್ಡಮ್ಮನಿಗೆ ಹಾಸ್ಯ ತೋರಿಸುತ್ತ "ಹೂಂ! ಹೂಂ! ನನ್ನನ್ನು ಜೈಲಿಗೆ ಕಳುಹಿಸುವೆಯಾ? ಕಳುಹಿಸು, ನೋಡೋಣ! ನೀನೇ ಅತ್ತು-ಅತ್ತು ಪ್ರಾಣ ಬಿಡುವೆ! ನನಗೇನು?" ಎಂದನು.

"ನಾನೇಕೆ ಅಳಲಿ? ಹೋಗು, ನನ್ನೆದುರಿಗೆ ನಿಲ್ಲಬೇಡ! ಪಾಪಿ, ಎದುರಿಗೆ ನಿಲ್ಲಬೇಡ, ಹೊರಡು!"

ಗಯಾರಾಮನು ಜೋರಾಗಿ ಕಿರಿಚುತ್ತ "ನೀನು ಮೊದಲು ನನಗೇನಾದರೂ ತಿನ್ನಲು ಕೊಡು? ನಂತರ ಹೊರಟು ಹೋಗುವೆನು. ಬೆಳಿಗೆದ್ದು ಒಂದು ಹಿಡಿ ಪುರಿಯನ್ನು ತಿಂದದ್ದು-- ನನಗೆ ಹಸಿವೆಯಾಗುವುದಿಲ್ಲವೇ?" ಎಂದನು.

ಗಂಗಾಮಣಿಯು ಏನೋ ಹೇಳಬೇಕೆಂದಿದ್ದಳು; ಅಷ್ಟರಲ್ಲಿ ಶಿವನೂ ಪಂಚುವೂ ಠಾಣೆಯಿಂದ ಹಿಂತಿರುಗಿದರು. ಗಯಾರಾಮನ ಕಡೆಗೆ ಶಿವನ ದೃಷ್ಟಿ, ಬೀಳುತ್ತಲೇ, ಕ್ರೋಧದಿಂದ ಅವನ ಮೈ ಉರಿಯತೊಡಗಿತು. "ನೀಚ! ಕೃತಘ್ನ! ಪುನಃ ನಮ್ಮ ಮನೆಗೆ ಬಂದೆಯಾ ಹೊರಡು ಇಲ್ಲಿಂದ! ಪಂಚೂ! ಆ ನೀಚನನ್ನು ಹಿಡಿದುಕೋ?" ಎಂದನು ಶಿವ.

ತಕ್ಷಣವೇ ಗಯಾರಾಮನು ಕಾಲಿಗೆ ಬುದ್ಧಿ ಹೇಳಿದನು. ಹೋಗುತ್ತ ಹೋಗುತ್ತ "ಆ ನೀಚ, ಪಾಪಿ ಪಂಚುವಿನ ಕಾಲುಗಳನ್ನು ಮುರಿಯದಿದ್ದರೆ ನನ್ನ ಹೆಸರೇ ಗಯಾರಾಮನಲ್ಲ!" ಎಂದು ಹೇಳಿ ಹೋದನು.

ಒಂದು ನಿಮಿಷದಲ್ಲೇ ಇಷ್ಟು ಮಾತುಗಳೂ ನಡೆದವು. ಗಂಗಾಮಣಿಗೆ ಉಸಿರೆತ್ತಲು ಸಹ ಸಮಯ ಸಿಗಲಿಲ್ಲ.

ಶಿವನು ಅತ್ಯಂತ ಕ್ರೋಧದಿಂದ ತನ್ನ ಪತ್ನಿಯನ್ನು ಕುರಿತು ನುಡಿದನು— "ನಿನ್ನ ಒತ್ತಾಸೆಯಿಂದಲೇ ಅವನು ಇಷ್ಟೊಂದು ಕೊಬ್ಬಿ ಹೋಗಿರುವನು! ಇನ್ನು ಮುಂದೆ ಆ ನೀಚನನ್ನು ಮನೆಗೆ ಸೇರಿಸಿದೆಯಾದರೆ ನನ್ನ ಮೇಲಾಣೆ, ತಿಳಿದೆಯಾ?"

" ಹೌದಕ್ಕ! ಅವನಿಂದ ನಿನಗೇನೂ ತೊಂದರೆಯಿಲ್ಲದಿದ್ದರೂ, ನಮ್ಮ ಪ್ರಾಣ ಹೋಗುವುದು! ಯಾವ ಅರ್ಧ ರಾತ್ರಿಯಲ್ಲಿ ಎಲ್ಲಿ ಅವಿತು ಕೊಂಡಿದ್ದು, ದೊಣ್ಣೆಯಿಂದ ಹೊಡೆದು ಕಾಲುಗಳನ್ನು ಮುರಿದು ಬಿಡು ವನೋ?— ಹೇಳುವಂತಿಲ್ಲ." ಎಂದನು ಪಂಚು.

" ನಾಳೆ ಬೆಳಗಾದ ಕೂಡಲೇ ಪೋಲೀಸಿನವರ ಕೈಯಿಂದ ಇವನನ್ನು ಹಿಡಿಸದಿದ್ದರೆ ನನ್ನ ಹೆಸರೇ ... ... !" ಎಂದು ಮುಂತಾಗಿ ಕೂಗಾಡಿ ದನು ಶಿವ.

ಗಂಗಾಮಣಿಯು ಸ್ತಂಭದಂತೆ ಸುಮ್ಮನೆ ಕುಳಿತಿದ್ದಳು; ಒಂದು ಮಾತನ್ನೂ ಆಡಲಿಲ್ಲ. ಅಂಜುಬುರುಕ ಪಂಚುವು ಆ ರಾತ್ರಿ ಮನೆಗೆ ಸಹ ಹೋಗಲಿಲ್ಲ; ಅಲ್ಲೇ ಮಲಗಿಕೊಂಡಿದ್ದ.

ಮರುದಿನ ಬೆಳಗ್ಗೆ ೧೦ ಗಂಟೆಗೆ ಸರಿಯಾಗಿ ಪೋಲೀಸಿನವರು ತಮ್ಮ ಕಾಯಿದೆಯ ಮೇರೆಗೆ, ವಿಚಾರಣೆಗಾಗಿ ಬಂದರು. ಅನಧಿಕಾರ ಪ್ರವೇಶ, ಪಾತ್ರೆ-ಪದಾರ್ಥಗಳ ನಷ್ಟ, ಉರಿಯುತ್ತಿದ್ದ ಕೊಳ್ಳಿಯಿಂದ ಹೆಂಗಸನ್ನು ಹೊಡೆದ ಅಪರಾಧ, ಮುಂತಾದ ದೋಷಾರೋಪಣೆಗಳೇನೋ ಇದ್ದೇ ಇದ್ದುವು. ಊರಲ್ಲೆಲ್ಲಾ ದೊಡ್ಡ ಗಲಭೆಗಾರಂಭವಾಯಿತು.

ಇಷ್ಟೆಲ್ಲ ಜಗಳಕ್ಕೆ ಮುಖ್ಯ ಕಾರಣನಾದ ಗಯಾರಾಮನನ್ನು ಹಿಡಿದು ಕರೆತರಲಾಯಿತು. ಪೋಲಿಸಿನವರನ್ನು ನೋಡುತ್ತಲೇ ಅವನು ಹೆದರಿಕೆ ಯಿಂದ ಅಳತೊಡಗಿದನು, ಮತ್ತು " ಇವರಾರಿಗೂ ನನ್ನನ್ನು ಕಂಡರೆ ಆಗುವುದಿಲ್ಲ. ಆದ್ದರಿಂದಲೇ ಎಲ್ಲರೂ ಸೇರಿ ನನ್ನನ್ನು ಪೋಲೀಸಿಗೆ ಕೊಡಲು ಪ್ರಯತ್ನಿಸುತ್ತಿರುವರು?" ಎಂದನು.

ಪೋಲೀಸ್ ಇನ್ಸ್‌ಪೆಕ್ಟರನು ವಯೋವೃದ್ಧರಾಗಿದ್ದರು. ಹುಡುಗನ ವಯಸ್ಸನ್ನೂ, ಅವನ ಅಳುದನಿಯನ್ನು ಕೇಳಿ ಅವರ ಹೃದಯ ಕರಗಿತು. " ಏಕಪ್ಪಾ ಗಯಾರಾಮ? ನಿನ್ನನ್ನು ಯಾರೂ ಪ್ರೀತಿಸುವುದಿಲ್ಲವೇ?" ಎಂದು ಕೇಳಿದರು.

" ದೊಡ್ಡಮ್ಮ ಒಬ್ಬಳು ಮಾತ್ರ ನನ್ನನ್ನು ಪ್ರೀತಿಸುವಳು; ಬೇರೆ ಯಾರೂ ನನ್ನನ್ನು ಪ್ರೀತಿಸುವುದಿಲ್ಲ!"

' ಹಾಗಿದ್ದರೆ ದೊಡ್ಡಮನನ್ನೇಕೆ ಹೊಡೆದೆ?"

"ಇಲ್ಲ! ನಾನು ಹೊಡೆಯಲಿಲ್ಲ!" ದೊಡ್ಡಮ್ಮನು ಕಿಟಕಿಯ ಮರೆಯಲ್ಲಿ ನಿಂತಿದ್ದಳು. ಅವಳ ಕಡೆ ತಿರುಗಿ ಗಯಾರಾಮನು "ನಾನು ಯಾವಾಗ ನಿನ್ನನ್ನು ಹೊಡೆದೆ, ದೊಡ್ಡಮ್ಮ?" ಎಂದು ಕೇಳಿದನು.

ಪಂಚುವು ಬಳಿಯಲ್ಲೇ ಕುಳಿತಿದ್ದನು. ಗಯಾರಾಮನ ಕಡೆ ಒಮ್ಮೆ ವಕ್ರ ದೃಷ್ಟಿಯಿಂದ ನೋಡಿ, ಅಕ್ಕನನ್ನು ಕುರಿತು ನುಡಿದನು— "ಇನ ಸ್ಪೆಕ್ಟರ್ ಸಾಹೇಬರು ಕೇಳುತ್ತಿರುವರು ಸತ್ಯವಾಗಿ ನಡೆದದ್ದನ್ನು ಹೇಳಿ ಬಿಡು! ನಿನ್ನೆ ಮಧ್ಯಾಹ್ನ ಮನೆಗೆ ನುಗ್ಗಿ, ಅವನು ನಿನ್ನನ್ನು ಕೋಲಿನಿಂದ ಹೊಡೆಯಲಿಲ್ಲವೇ, ಅಕ್ಕ? ಧರ್ಮಾವತಾರದ ಮುಂದೆ ಸಟೆಯನಾಡ ಬಾರದು!"

ಗಂಗಾಮಣಿಯು ಅಸ್ಪಷ್ಟ ಧ್ವನಿಯಲ್ಲಿ ಅದೇನೋ ನುಡಿದಳು. ಪಂಚುವು ಅದನ್ನೇ ಸ್ಪಷ್ಟ ಧ್ವನಿಯಿಂದ ಪುನರಾವರ್ತಿಸಿ ನುಡಿದನು— "ಹೌದು, ಸ್ವಾಮಿ! ಅವನು ಹೊಡೆದನೆಂದು ನಮ್ಮಕ್ಕ ಹೇಳುತ್ತಿರು ವಳು!"

ಗಯಾರಾಮನಿಗೆ ಮಿತಿಮೀರಿದ ಕೋಪವುಂಟಾಯಿತು. ಅವನು ಹಲ್ಲುಗಳನ್ನು ಕಡಿಯುತ್ತ "ಎಲೈ, ನೀಚ ಪಂಚು! ನಿನ್ನ ಕಾಲುಗಳನ್ನು ಮುರಿದು ಹಾಕದಿದ್ದರೆ ನನ್ನ ಹೆಸರು ...... ....!" ಎಂದನು. ಕ್ರೋಧಾ ವೇಶದಲ್ಲಿದ್ದ ಅವನಿಗೆ ಮಾತನ್ನು ಪೂರ್ತಿ ಮಾಡಲು ಸಹ ಆಗಲಿಲ್ಲ,— ಅಳಲಾರಂಭಿಸಿ ಬಿಟ್ಟನು!

ಪಂಚುವು ಉತ್ತೇಜಿತನಾಗಿ ನುಡಿದನು— "ನೋಡಿ, ಸ್ವಾಮಿ! ನಿಮ್ಮ ಮುಂದೆಯೇ ಕಾಲುಗಳನ್ನು ಮುರಿಯುವೆನೆಂದು ಹೇಳುತ್ತಿರುವನು? ಅಂದಬಳಿಕ ನಿಮ್ಮ ಪರೋಕ್ಷದಲ್ಲಿ ಖೂನಿಯನ್ನೇ ಮಾಡಿ ಬಿಡುವನೇನೋ! ಅವನನ್ನು ಹಿಡಿದುಕೊಳ್ಳುವಂತೆ ಆಜ್ಞೆ ಮಾಡಿ, ಸ್ವಾಮಿ!"

ಇನ್ಸ್‌ಪೆಕ್ಟರ್ ಸಾಹೇಬರು ಒಮ್ಮೆ ಮುಗುಳುನಗೆ ನಕ್ಕರು. ಗಯಾ ರಾಮನು ಮತ್ತೆ ಕಣ್ಣೊರೆಸಿಕೊಳ್ಳುತ್ತ "ನಮ್ಮ ಅಮ್ಮ ಇಲ್ಲದ್ದರಿಂದಲ್ಲವೇ ಎಲ್ಲರೂ ಹೀಗೆ ಮಾಡುತ್ತಿರುವುದು? ಅವಳಿದ್ದಿದ್ದರೆ......... ....!" ಎಂದನು. ಈ ಬಾರಿಯೂ ಅವನ ಮಾತು ಪೂರ್ತಿಯಾಗಲಿಲ್ಲ. ತಾಯಿಯ ನೆನಪು ಸಹ ಅವನಿಗಿರಲಿಲ್ಲ. ಇಂದು ಅಕಸ್ಮಾತ್ತಾಗಿ ಕಷ್ಟಕ್ಕೆ ಸಿಲುಕಿ, ಅದೇ ಮಾತೆಯನ್ನು ನೆನೆಸಿಕೊಳ್ಳುತ್ತ, ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು.

ಇನ್ನು ಶಂಭುವಿನ ವಿಚಾರ. ಅವನ ವಿರುದ್ಧವಾಗಿ ಯಾವ ಮಾತೂ ಪ್ರಮಾಣಿತವಾಗಲಿಲ್ಲ. ಇನಸ್ಪೆಕ್ಟರ್ ಸಾಹೇಬರು ಕೋರ್ಟಿನಲ್ಲಿ ಮೊಕದ್ದಮೆ ಹೂಡುವಂತೆ ಹೇಳಿ, ರಿಪೋರ್ಟನ್ನು ತೆಗೆದುಕೊಂಡು ಅಲ್ಲಿಂದ ಹೊರಟರು. ಮೊಕದ್ದಮೆ ಹೂಡುವ ವಿಷಯವಾಗಿ ಎಲ್ಲಾ ಜವಾಬ್ದಾರಿಯನ್ನೂ ಪಂಚುವು ತಾನೇ ವಹಿಸಿಕೊಂಡನು ಮತ್ತು ಅಕ್ಕನನ್ನು ಹೊಡೆದದ್ದಕ್ಕಾಗಿ ಗಯಾರಾಮನಿಗೆ ತಕ್ಕ ಶಿಕ್ಷೆ ದೊರೆಯುವುದೆಂದು ಊರಲ್ಲೆಲ್ಲಾ ಹೇಳಿಕೊಳ್ಳುತ್ತ ತಿರುಗತೊಡಗಿದನು !

* * * *

ಆದರೆ ಗಯಾರಾಮನು ಮಾತ್ರ ನಿಶ್ಚಿಂತನಾಗಿದ್ದನು. ಅಕ್ಕ-ಪಕ್ಕದವರೆಲ್ಲರೂ ಶಿವನ ಈ ಆಚರಣೆಗಾಗಿ ಅವನನ್ನು ನಿಂದಿಸತೊಡಗಿದರು. ಶಿವನು ಅವರ ಸಂಗಡವೆಲ್ಲಾ ಜಗಳಾಡುತ್ತಿದ್ದನು; ಆದರೆ ಅವನ ಪತ್ನಿಯು ಮಾತ್ರ ಬಾಯಿ ತೆರೆಯದೆ ಸುಮ್ಮನಿರುತ್ತಿದ್ದಳು. ಅಂದು ಗಯಾರಾಮನ ಅತ್ಯಂತ ದೂರದ ಬಳಗದ ಚಿಕ್ಕಮ್ಮನೊಬ್ಬಳು ಈ ವಿಷಯವೆಲ್ಲವನ್ನೂ ಕೇಳಿ ಶಿವನ ಮನೆಗೆ ಬಂದಳು; ಮತ್ತು ಅವನ ಪತ್ನಿಯನ್ನು ಮನಬಂದಂತೆ ಬೈದು, ಅನೇಕ ಕಟುವಾಕ್ಯಗಳನ್ನಾಡಿ ಹೋದಳು; ಅಷ್ಟಾದರೂ ಗಂಗಾಮಣಿಯು ಮೌನದಿಂದಿದ್ದಳು. ಶಿವನು ಮನೆಗೆ ಬಂದನಂತರ ಪಕ್ಕದ ಮನೆಯವರಿಂದ ನಡೆದ ಸಂಗತಿಯೆಲ್ಲವೂ ಅವನಿಗೆ ತಿಳಿಯಬಂತು. ಅವನು ಕ್ರೋಧದಿಂದ ತನ್ನ ಪತ್ನಿಯನ್ನು ಕುರಿತು ನುಡಿದನು— "ನೀನು ಅವಳಂದ ಮಾತುಗಳೆಲ್ಲವನ್ನೂ ಕೇಳಿಕೊಂಡು ಸುಮ್ಮನಿದ್ದೆಯಾ? ಏನೂ ಉತ್ತರ ಕೊಡಲಾಗಲಿಲ್ಲವೇ?"

"ಇಲ್ಲ!" ಎಂದಳು ಗಂಗಾಮಣಿ.

"ನಾನು ಮನೆಯಲ್ಲಿದ್ದಿದ್ದರೆ ಆ ನೀಚಳನ್ನು ಪರಕೆಯಿಂದ ಹೊಡೆದೋಡಿಸುತ್ತಿದ್ದೆ."

"ಹಾಗಿದ್ದರೆ ನಾಳೆಯಿಂದ ನೀವು ಮನೆಯಲ್ಲೇ ಕುಳಿತುಕೊಂಡಿರಿ; ಎಲ್ಲಿಗೂ ಹೋಗಬೇಡಿ!" ಎಂದು ನುಡಿದು, ಗಂಗಾಮಣಿಯು ಅಲ್ಲಿಂದ ತನ್ನ ಕೆಲಸಕ್ಕಾಗಿ ಹೊರಟು ಹೋದಳು.

ಅಂದು ಮಧ್ಯಾಹ್ನ ಶಿವನು ಮನೆಯಲ್ಲಿರಲಿಲ್ಲ. ಶಂಭುವು ಬಂದು, ಬಿದಿರು ಮೆಳೆಯಿಂದ ಕೆಲವು ಬಿದಿರನ್ನು ಕಡಿದುಕೊಂಡು ಹೋದನು.

ಶಬ್ದವಾದುದನ್ನು ಕೇಳಿ ಗಂಗಾಮಣಿಯು ಹೊರಗೆ ಬಂದು ನೋಡಿದಳು; ಆದರೆ ಇಂದು ಅವಳು ಒಂದು ಮಾತನ್ನು ಸಹ ಆಡಲಿಲ್ಲ. ಸುಮ್ಮನೆ ಒಳಕ್ಕೆ ಹೊರಟು ಹೋದಳು. ಎರಡು ದಿನಗಳ ನಂತರ ಶಿವನಿಗೆ ಈ ಸಮಾಚಾರ ತಿಳಿಯಬಂತು; ಹೆಂಡತಿಯ ಬಳಿಗೆ ಬಂದು ಕೂಗಾಡತೊಡಗಿದನು— ' ನಿನ್ನ ಕಿವಿಗಳೇನು ಮುಚ್ಚಿ ಹೋಗಿದ್ದುವೇ? ಪಕ್ಕದಲ್ಲೇ ಇರುವ ಬಿದಿರು ಮೆಳೆಯಿಂದ ಅವನು ಬಿದಿರು ಕತ್ತರಿಸಿಕೊಂಡು ಹೋದದ್ದು ನಿನಗೆ ಗೊತ್ತಾಗಲಿಲ್ಲವೇ ? ''

" ಗೊತ್ತಾಗಲಿಲ್ಲವೇಕೆ ? ನಾನೇ ಎಲ್ಲವನ್ನೂ ಕಣ್ಣಾರೆ ನೋಡಿದೆ ! " ಎಂದಳು ಗಂಗಾಮಣಿ

ಶಿವನು ಕ್ರುದ್ಧನಾಗಿ ' ಅಷ್ಟಾದರೂ ನೀನು ನನಗೇಕೆ ಹೇಳಲಿಲ್ಲ ?'' ಎಂದನು.

" ಹೇಳುವುದೇನು ! ಬಿದಿರು ಮೆಳೆಯು ನಿಮ್ಮೊಬ್ಬರಿಗೆ ಮಾತ್ರ ಸೇರಿದ್ದೇ ? ಅದರಲ್ಲಿ ಮೈದಂದಿರ ಭಾಗವೂ ಇಲ್ಲವೇ ? '' ಎಂದಳು ಗಂಗಾಮಣಿ.

ಈ ಮಾತನ್ನು ಕೇಳಿ ಶಿವನು ಆಶ್ಚರ್ಯಚಕಿತನಾದನು. "ಇದೇನು ಮಾತನಾಡುತ್ತಿರುವೆ ? '' ನಿನ್ನ ಬುದ್ಧಿ ಕೆಟ್ಟು ಹೋಗಿದೆಯೋ '' ಎಂದನು.

ಅಂದು ಸಾಯಂಕಾಲ ಪಂಚುವು ಕೋರ್ಟಿನಿಂದ ಬಹಳ ಆಯಾಸಗೊಂಡು ಮನೆಗೆ ಹಿಂತಿರುಗಿದನು, ಮತ್ತು ಸುಸ್ತಾಗಿ ಒಂದೆಡೆ ಸುಮ್ಮನೆ ಕುಳಿತುಬಿಟ್ಟನು. ಶಿವನು ಎಮ್ಮೆ ಹಸುಗಳಿಗೆ ಹಿಂಡಿಯನ್ನು ಕುಟ್ಟಿಡುತ್ತಿದ್ದದ್ದನು; ಕತ್ತಲೆಯಲ್ಲಿ ಅವನಿಗೆ ಪಂಚುವಿನ ಮುಖವು ಸರಿಯಾಗಿ ಕಾಣಲಿಲ್ಲ. ಅವನು ಗಾಬರಿಯಿಂದ ಎದ್ದು ಬಂದು " ಏನಾಯಿತು ? '' ಎಂದು ಕೇಳಿದನು.

ಪಂಚುವು ಗಂಭೀರತೆಯಿಂದ ಸ್ವಲ್ಪ ನಕ್ಕು ನುಡಿದನು— "ಪಂಚುವು ಇದ್ದ ಬಳಿಕ ಏನಾಗಬೇಕೋ ಅದೇ ಆಯಿತು ! ವಾರಂಟನ್ನು ಹೊರಡಿಸಿದ ಹೊರತು ಸ್ಥಳ ಬಿಟ್ಟು ಕದಲಲಿಲ್ಲ ! . ಈಗ ಅವನೆಲ್ಲಿರುವನೆಂದು ತಿಳಿದರೆ ಸಾಕು; ಆಯಿತು ಅವನ ಗತಿ ! "

ಶಿವನಿಗೆ ಅದೇಕೋ ಈ ವಿಷಯದಲ್ಲಿ ಒಂದು ವಿಧವಾದ ಹಟ ಉಂಟಾಗಿ ಹೋಗಿತ್ತು. ಎಷ್ಟು ಹಣ ಬೇಕಾದರೂ ಖರ್ಚಾಗಲಿ ಆ ನೀಚ ನನ್ನು ಒಮ್ಮೆ ಹಿಡಿಸಲೇ ಬೇಕು! ಅವನನ್ನು ಜೈಲಿಗೆ ಕಳುಹಿಸಿ, ನಂತರ ಎರಡನೆಯ ಕೆಲಸ ಮಾಡುವನು!" ಎಂದನು.

ನಂತರ ಬಹಳ ಹೊತ್ತಿನವರೆಗೆ ಇಬ್ಬರಲ್ಲೂ ವಿಧವಿಧವಾದ ಸಲಹೆ ನಡೆದುವು ರಾತ್ರಿ ಹನ್ನೊಂದು ಹೊಡೆಯಿತು ಇಷ್ಟಾದರೂ ಊಟಕ್ಕೆ ತಗಾದೆ ಬರದಿದ್ದುದನ್ನು ಕಂಡು ಶಿವನಿಗೆ ಅತ್ಯಾಶ್ಚರ್ಯವಾಯಿತು. ಅಡಿಗೆಯ ಮನೆಗೆ ಹೋಗಿ ನೋಡಿದನ— ಅಲ್ಲೇನಿಥ, ಬರಿಯ ಅಂಧಕಾರ!

ಮಲಗುವ ಕೊಠಡಿಗೆ ಹೋಗಿ ನೋಡಿದನು. ಗಂಗಾಮಣಿಯು ನೆಲದ ಮೇಲೆ ಚಾಪೆ ಹಾಸಿಕೊಂಡು ಮಲಗಿದ್ದಳು ಅವನು ಕ್ರೋಧ ಮತ್ತು ಆಶ್ಚರ್ಯದಿಂದ ನುಡಿದನು— "ಇದೇನು? ಅಡಿಗೆಯಾಗಿದ್ದರೆ ಊಟಕ್ಕೇಕೆ ಎಬ್ಬಿಸಬಾರದಿತ್ತು?"

ಗಂಗಾಮಣಿಯು ಪಕ್ಕಕ್ಕೆ ತಿರುಗಿ, ಮೆಲ್ಲಗೆ ನುಡಿದಳು—"ಊಟಕ್ಕೆ ಬ್ಬಿಸುವುದಕ್ಕೆ ಅಡಿಗೆ ಮಾಡಿದ್ದರಲ್ಲವೇ? ಮಾಡಿದವರಾರು?"

ಶಿವನು ಕ್ರೋಧದಿಂದ ಕೇಳಿದನು— 'ಇನ್ನೂ ಅಡಿಗೆ ಮಾಡ-ಲಿಲ್ಲವೇ?"

"ಇಲ್ಲ. ಈವೊತ್ತು ನನಗೆ ಮೈಯಲ್ಲಿ ಹುಷಾರಿಲ್ಲ ನನ್ನಿಂದ ಅಡಿಗೆ ಮಾಡಲಾಗುವುದಿಲ್ಲ!"

ಶಿವನಿಗೆ ಕೋಪ-ಹಸಿವೆಗಳೆರಡೂ ಕೂಡಿದವು. ಅವನ ಕ್ರೋಧವು ಮಿತಿಮೀರಿತು. ಮಲಗಿದ್ದ ಗಂಗಾಮಣಿಯ ಬೆನ್ನಿನ ಮೇಲೆ ಕಾಲಿನಿಂದ ಒಂಬೇಟು ಒದ್ದು, ನುಡಿದನು— 'ಇತ್ತಿಚೆಗೆ ನಿನಗೆ ಪ್ರತಿನಿತ್ಯವೂ ಮೈಯಲ್ಲಿ ಹುಷಾರಿ ಇರುವುದಿಲ್ಲ? ಅಡಿಗೆ ಮಾಡಲಾಗುವುದಿಲ್ಲವೇಕೆ? ಮಾಡಲಾಗದಿದ್ದರೆ ಇಲ್ಲಿರಬೇಡ, ನಡೆ! ಇಲ್ಲಿಂದ ಹೊರಟು ಹೋಗು!" ಎಂದನು

ಗಂಗಾಮಣಿಯು ಮರುಮಾತಾಡಲೂ ಇಲ್ಲ; ಎದ್ದು ಕುಳಿತು ಕೊಳ್ಳಲೂ ಇಲ್ಲ. ಮಲಗಿದ್ದಂತೆಯೇ ಮಲಗಿದ್ದಳು. ಆ ರಾತ್ರಿ ಭಾವ-ಮೈದುನರಿಬ್ಬರೂ ಉಪವಾಸವೇ ಮಲಗಿಕೊಂಡರು.

ಬೆಳಗಾಗೆದ್ದು ನೋಡಲಾಗಿ ಗಂಗಾಮಣಿಯು ಮನೆಯಲ್ಲಿರಲಿಲ್ಲ! ಅಲ್ಲಿ ಇಲ್ಲಿ ಸ್ವಲ್ಪ ಹೊತ್ತು ಹುಡುಕಿ ನೋಡಿದ ನಂತರ ಪಂಚುವು ಹೇಳಿದನು—"ಅಕ್ಕನು ಖಂಡಿತವಾಗಿಯೂ ನಮ್ಮ ಮನೆಗೆ ಹೊರಟು ಹೋಗಿರಬೇಕು?"

ಪತ್ನಿಯ ಈ ಪರಿಯ ಆಕಸ್ಮಿಕ ಪರಿವರ್ತನೆಯ ಕಾರಣವನ್ನು ಶಿವನು ಮನಸಿನಲ್ಲೇ ತಿಳಿದುಕೊಂಡನು; ಆದ್ದರಿಂದ ಅವನ ಕಾತುರತೆಯು ಕ್ಷಣ ಕ್ಷಣಕ್ಕೂ ಹೆಚ್ಚಾಗತೊಡಗಿತು ಕಾತುರತೆಯು ಹೆಚ್ಚಾದಂತೆಲ್ಲ, ಮೊಕದ್ದಮೆ-ದಾವೆಗಳ ಕಡೆಗಿದ್ದ ತೀವ್ರ ಗಮನವೂ ತಾಮಸವಾಗತೊಡಗಿತು. 'ಎಲ್ಲಾದರೂ ಹಾಳಾಗಿ ಹೋಗಲಿ; ಇನ್ನು ನಾನು ಅವಳನ್ನು ಹುಡುಕುವುದಿಲ್ಲ!'' ಎಂದನು.

ಗಂಗಾಮಣಿಯು ತನ್ನ ತವರ ಮನೆಗೂ ಹೋಗಿಲ್ಲವೆಂದು ಸಾಯಂಕಾಲ ಸಮಾಚಾರ ತಿಳಿಯಬಂತು. ಅದಕ್ಕೆ ಪಂಚುವು "ಹಾಗಿದ್ದರೆ ಖಂಡಿತವಾಗಿಯೂ ಅಕ್ಕನು ಅತ್ತೆಯ ಮನೆಗೆ ಹೋಗಿರಬೇಕು!" ಎಂದನು

ಗಂಗಾಮಣಿಯ ಅತ್ತೆಯೊಬ್ಬಳು ದೊಡ್ಡ ಮನೆತನದಲ್ಲಿ ಮದುವೆಯಾಗಿದ್ದಳು. ಸುಮಾರು ೧೦-೧೫ ಮೈಲು ದೂರದಲ್ಲಿದ್ದ ಒಂದು ಹಳ್ಳಿಯಲ್ಲಿದ್ದಳು. ಹಬ್ಬ-ಹರಿದಿನಗಳಲ್ಲಿ ಒಮ್ಮೊಮ್ಮೆ ಗಂಗಾಮಣಿಯನ್ನು ತಮ್ಮ ಹಳ್ಳಿಗೆ ಕರೆದುಕೊಂಡು ಹೋಗುತ್ತಿದ್ದಳು. ಶಿವನು ವಾಸ್ತವವಾಗಿ ತನ್ನ ಪತ್ನಿಯನ್ನು ಬಹಳ ಪ್ರೀತಿಸುತ್ತಿದ್ದನು. ಕೇವಲ ಬಾಯಿಂದ ಮಾತ್ರ "ಎಲ್ಲಾದರೂ ಹೋಗಲಿ ಸಾಯಲಿ!" ಎಂದು ನುಡಿಯುತ್ತಿದ್ದನು. ಆದರೆ ಒಳಗಿಂದೊಳಗೇ ಮನಸ್ಸಿನಲ್ಲೇ ಕೊರಗುತ್ತಿದ್ದನು. ಅಂತೂ ಹೀಗೆಯೇ ಐದಾರು ದಿನಗಳು ಕಳೆದುವು. ಇತ್ತ ಮನೆ ಕೆಲಸ, ಹೊರಗಿನ ಕೆಲಸ, ದನ-ಕರುಗಳು ಎಲ್ಲವನ್ನೂ ನಿರ್ವಹಿಸುವುದು ಅವನಿಗೆ ಅಸಾಧ್ಯವೆನಿಸಿತು. ಇನ್ನು ಒಂದು ದಿನವನ್ನೂ ಕಳೆಯುವುದು ಸಾಧ್ಯವಿಲ್ಲದೆ ಹೋಯಿತು.

ಏಳನೆಯ ದಿವಸ ಅವನು ತನ್ನ ಪೌರುಷವೆಲ್ಲವನ್ನೂ ಗಂಗಾನದಿಯಲ್ಲಿ ಹರಿಯಬಿಟ್ಟು ಗಂಗಾಮಣಿಯ ಅತ್ತೆಯ ಮನೆಗೆ (ತಾನು ಹೋಗದಿದ್ದರೂ) ಎತ್ತಿನ ಗಾಡಿಯನ್ನು ಕೊಟ್ಟು ಕಳುಹಿದನು.

ಮರುದಿನ ಖಾಲಿ ಗಾಡಿಯು ಬಂದು ಮನೆಯ ಮುಂದೆ ನಿಂತಿತು, ಮತ್ತು ಅಲ್ಲಿ ಯಾರೂ ಇಲ್ಲವೆಂದು ಸಮಾಚಾರ ತಿಳಿಯಬಂತು. ಶಿವನು ತಲೆಯ ಮೇಲೆ ಕೈ ಇಟ್ಟುಕೊಂಡು ಕುಳಿತುಬಿಟ್ಟನು.

ದಿನವೆಲ್ಲಾ ಸ್ನಾನಪಾನವಿಲ್ಲ ಊಟತಿಂಡಿಯಿಲ್ಲ; ನಿರ್ಜೀವ ಶವದಂತೆ ಸುಮ್ಮನೆ ಬಂದು ಮಂಚದ ಮೇಲೆ ಬಿದ್ದಿದ್ದನು. ಅಷ್ಟರಲ್ಲಿ ಪಂಚುವು ಅತ್ಯಂತ ಉತ್ತೇಜಿತ ಭಾವದಿಂದ ಒಳಗೆ ಬಂದು ಹೇಳಿದನು— " ಸಾಮಂತ ಸಾಹೇಬರೇ. ಪತ್ತೆ ದೊರಕಿತು ! ಪತ್ತೆ ದೊರಕಿತು !! " ಎಂದನು.

ಶಿವನು ತಳಮಳಿಸುತ್ತ ಎದ್ದು ಕುಳಿತನು; ಮತ್ತು ಆತುರದಿಂದ ಕೇಳಿದನು— " ಎಲ್ಲಿರುವಳು ? ಯಾರು ಹೇಳಿದರು ? ಹುಷಾರಾಗಿರುವಳಷ್ಟೆ ? ಗಾಡಿ ತೆಗೆದುಕೊಂಡು ನಡೆ; ಈ ತಕ್ಷಣ ನಾವಿಬ್ಬರೂ ಹೋಗೋಣ ನಡೆ ! "

" ನಾನು ಹೇಳುತ್ತಿರುವುದು ಅಕ್ಕನ ಮಾತಲ್ಲ. ಗಯಾರಾಮನ ಪತ್ತೆ ದೊರೆಕಿತೆಂದು ಹೇಳಿದೆನು ! " ಎಂದನು ಪಂಚು.

ಶಿವನು ಪುನಃ ಮಂಚದ ಮೇಲೆ ಬಿದ್ದುಕೊಂಡನು; ಮತ್ತೇನೂ ಮಾತನಾಡಲಿಲ್ಲ.

ಆಗ ಪಂಚುವು ಶಿವನಿಗೆ ಅನೇಕ ವಿಧಗಳಲ್ಲಿ ತಿಳಿಯ ಹೇಳಲಾರಂಭಿಸಿದನು— " ಇಂತಹ ಒಳ್ಳೆಯ ಸಮಯವನ್ನು ಕೈಯಾರೆ ಕಳೆದುಕೊಳ್ಳಬಾರದು. ಅಕ್ಕನಾದರೆ ಒಂದಲ್ಲ ಒಂದು ದಿವಸ ಮನೆಗೆ ಬಂದೇ ಬರುವಳು. ಈ ಸಮಯವನ್ನು ಬಿಟ್ಟರೆ, ನಂತರ ಆ ದುಷ್ಟನನ್ನು ದೊರಕಿಸಿಕೊಳ್ಳುವುದು ದುಸ್ತರವಾಗುವುದು ! "

ಶಿವನು ಉದಾಸೀನ ಭಾವದಿಂದ ನುಡಿದನು— " ಇರಲಿ, ತಡೆ ಪಂಚೂ ! ಮೊದಲು ಅವಳು ಹಿಂತಿರುಗಲಿ, ನಂತರ............ ! "

ಮಾತನ್ನು ಅಷ್ಟಕ್ಕೇ ಕತ್ತರಿಸಿ ಪಂಚುವು ನುಡಿದನು— " ನಂತರ ಏನಾಗುವುದು, ಸಾಮಂತರೇ ? ಅಕ್ಕನು ಹಿಂತಿರುಗುವುದಕ್ಕಿಂತ ಮುಂಚಿತವಾಗಿಯೇ ಈ ಕೆಲಸವನ್ನು ಮುಗಿಸಿಕೊಳ್ಳಬೇಕು. ಅವಳು ಬಂದಬಳಿಕ ಏನೂ ಆಗುವುದಿಲ್ಲ ! '

ಶಿವನು ಒಪ್ಪಿಗೆಯಿತ್ತನು. ಆದರೆ ತನ್ನ ಶೂನ್ಯ-ಗೃಹದ ಕಡೆ ನೋಡಿದ ನೆಂದರೆ, ಅವನಿಗೆ ಇತರರ ಮೇಲಿನ ಸೇಡು ತೀರಿಸಿಕೊಳ್ಳುವ ಸಾಹಸ ವುಂಟಾಗುತ್ತಿರಲಿಲ್ಲ. ಹಾಗೂ ಹೀಗೂ, ಪಂಚುವು ಬಲತ್ಕಾರವಾಗಿ ಅವನಿಂದ ಕೆಲಸ ತೆಗೆದುಕೊಳ್ಳುತ್ತಿದ್ದನು.

ಮರುದಿನ ಇನ್ನೂ ಮುಸುಕು-ಮುಸುಕಾಗಿರುವಾಗಲೇ ಅವರಿಬ್ಬರೂ ಕೋರ್ಟಿನ ಕಾಲಾಳುಗಳನ್ನು ಸಂಗಡ ಕರೆದುಕೊಂಡು ಹೊರಟರು. ಶಂಭುವು ಗಯಾರಾಮನ ಹೆಸರನ್ನು ಬದಲಾಯಿಸಿ, ಅವನನ್ನು ಪಾಂಚಲಾ ಸರಕಾರೀ ಸೇತುವೆಯ ಕೆಲಸದಲ್ಲಿ ಸೇರಿಸಿರುವನೆಂದು ಪಂಚುವು ಅರ್ಧ ದಾರಿಯಲ್ಲಿ ಹೇಳಿದನು. ಮತ್ತು ಅಲ್ಲೇ ಹೋಗಿ ಅವನನ್ನು ಹಿಡಿಯ ಬೇಕೆಂಬುದನ್ನೂ ನಿರ್ಧರಿಸಲಾಯಿತು.

ಶಿವನು ಮೊದಲಿನಿಂದಲೂ ಒಂದು ಮಾತೂ ಆಡದೆ ಸುಮ್ಮ ನಿದ್ದಂತೆಯೇ ಈಗಲೂ ಸುಮ್ಮನಿದ್ದನು.

ಅವರು ಪಾಂಚಲಾ ಗ್ರಾಮವನ್ನು ತಲುಪಿದಾಗ ಮಧ್ಯಾಹ್ನವಾಗಿತ್ತು. ಊರಿನ ಒಂದೆಡೆ ವಿಶಾಲವಾದ ಮೈದಾನ; ಅದರಲ್ಲಿ ಅನೇಕ ಮಂದಿ ಕೆಲಸ ಗಾರರು; ಮರದ ತುಂಡುಗಳು, ಕಬ್ಬಿಣದ ಪಟ್ಟಿಗಳು ಮುಂತಾದ ಅನೇಕ ಸಾಮಾನುಗಳು ರಾಶಿ ರಾಶಿಯಾಗಿ ಬಿದ್ದಿದ್ದವು;— ಮತ್ತು ಕೆಲಸಗಾರರು ವಾಸಿಸುವುದಕ್ಕಾಗಿ ಕಟ್ಟಿಕೊಂಡ ಗುಡಿಸಲುಗಳು ನಾಲ್ಕೂ ಕಡೆ ಗೋಚರ ವಾಗುತ್ತಿದ್ದುವು. ಎಲ್ಲರನ್ನೂ ಬಹಳ ವಿಚಾರಣೆ ಮಾಡಿದಬಳಿಕ ಒಬ್ಬನು ಹೇಳಿದನು— "ಸಾಹೇಬರ ಮನೆಯಲ್ಲಿ ಪಾಠ ಹೇಳುವ ಕೆಲಸ ಮಾಡು ತ್ತಿರುವ ಹುಡುಗನಲ್ಲವೇ? ಅವನ ಮನೆಯು ಅದೋ ಅಲ್ಲಿದೆ?" ಎಂದು ಹೇಳಿ ಅವನು ಒಂದು ಪುಟ್ಟ ಗುಡಿಸಲಿನ ಕಡೆ ತೋರಿಸಿದನು ಆಗ ಎಲ್ಲರೂ ಶಬ್ದ ಮಾಡದೆ ಆ ಗುಡಿಸಲಿನ ಬಳಿ ಬಂದರು ಒಳಗಿನಿಂದ ಗಯಾರಾಮನ ಧ್ವನಿಯು ಕೇಳಿಸುತ್ತಿತ್ತು ಪಂಚುವಿನ ಆನಂದಕ್ಕೆ ಮೇರೆಯೇ ಇರಲಿಲ್ಲ ಅವನು ಶಿವನನ್ನೂ ಕಾಲಾಳುಗಳನ್ನೂ ಸಮ್ಮುಖ ದಲ್ಲಿರಿಸಿಕೊಂಡು, ಬಾಗಿಲಿಗೆ ಅಡ್ಡವಾಗಿ ನಿಂತುಕೊಂಡನು. ಆಗ ಒಮ್ಮೆ ಅವನ ದೃಷ್ಟಿಯು ಒಳಗೆ ಬೀಳುತ್ತಲೇ ವಿಸ್ಮಯ, ಕ್ಷೋಭೆ ಮತ್ತು ನಿರಾಶೆ

ಗಳಿಂದ ನೀರಸವಾಯಿತು! ಅವನ ದೃಷ್ಟಿಗೆ ಬಿದ್ದದ್ದೇನು? ತನ್ನ ಅಕ್ಕನು ತಟ್ಟೆಯಲ್ಲಿ ಎಲ್ಲವನ್ನೂ ಅಣಿಯಾಗಿ ಬಡಿಸಿ ಮತ್ತೊಂದು ಕೈಯಿಂದ ಬೀಸಣಿಕೆಯಲ್ಲಿ ಗಾಳಿ ಹಾಕುತ್ತಿದ್ದಳು, ಮತ್ತು ಗಯಾರಾಮನು ಕುಳಿತು ಊಟ ಮಾಡುತ್ತಿದ್ದನು!!

ಶಿವನನ್ನು ಕಾಣುತ್ತಲೇ ಗಂಗಾಮಣಿಯು ತಲೆಯ ಮೇಲೆ ತುಸು ಮುಸುಕನ್ನೆಳೆದು, ಗಂಭೀರಭಾವದಿಂದ ನುಡಿದಳು— ನೀವುಗಳೆಲ್ಲರೂ ಸ್ವಲ್ಪ ಶಾಂತವಾಗಿ, ನದಿಯಲ್ಲಿ ಸ್ನಾನ ಮಾಡಿ ಬನ್ನಿರಿ! ಅಷ್ಟು ಹೊತ್ತಿಗೆ ನಾನು ಪುನಃ ಅಡಿಗೆ ಮಾಡಿಟ್ಟಿರುವೆನು!" ಎಂದಳು.

---

ಪ್ರಕಾಶಕರು :— ಭಾಲಚಂದ್ರ ಘಾಟೇಕರ, ಧಾರವಾಡ

ಮುದ್ರಕರು:— ಶ್ರೀ ಯ. ಪವಾರ, ಧಾರವಾಡ ಪ್ರೆಸ್, ಧಾರವಾಡ

# ಹರಿಚರಣ

ಆ ಮಾತಾಗಿ ಇಂದಿಗೆ ಬಹಳ ದಿನಗಳಾದುವು. ಸುಮಾರು ಹತ್ತು ಹನ್ನೆರಡು ವರ್ಷಗಳ ಹಿಂದಿನ ಮಾತು. ಆಗ ದುರ್ಗಾದಾಸ ಬಾಬುಗಳು ಇನ್ನೂ ವಕೀಲರಾಗಿರಲಿಲ್ಲ ಅವರ ಪರಿಚಯ ನಿಮಗೆ ಸಾಕಷ್ಟು ಇರಲಿಕ್ಕಿಲ್ಲ, ಆದರೆ ನನಗೆ ಮಾತ್ರ ಅವರ ಪರಿಚಯು ಚೆನ್ನಾಗಿರುವುದು. ಬನ್ನಿರಿ, ಅವರ ಪರಿಚಯುವನ್ನು ನಿಮಗೆ ಮಾಡಿಸಿಕೊಡುವೆ.

ತಂದೆತಾಯಿಯಿಲ್ಲದ ಅನಾಥ ಬಾಲಕನೊಬ್ಬ ಎಲ್ಲಿಂದಲೋ ಬಂದು ರಾಮದಾಸ ಬಾಬುಗಳ ಮನೆಯಲ್ಲಿ ಇರತೊಡಗಿದ. ಎಲ್ಲರೂ ಎನ್ನುತ್ತಿದ್ದರು ಹುಡುಗ ಬಹಳ ಒಳ್ಳೆಯವ; ಸುಂದರ ಮತ್ತು ತಿಳಿವಳಿಕೆಯುಳ್ಳವ. ದುರ್ಗಾದಾಸ ಬಾಬುಗಳಿಗೆ ಇವನೇ ಅತ್ಯಂತ ಪ್ರೀತಿಯ ಆಳುಮಗ.

ಚಿಕ್ಕ ದೊಡ್ಡ ಕೆಲಸವನ್ನು, ನೀಚ ಉಚ್ಚ ಕೆಲಸವನ್ನು ಅವನು ಮಾಡಲು ಸದಾ ಸಿದ್ಧನಿರುತ್ತಿದ್ದ. ಆಕಳಿಗೆ ಮೇವು ಹಾಕುವುದು ಮತ್ತು ನೀರು ಕುಡಿಸುವುದನ್ನು ಮೊದಲುಗೊಂಡು ರಾಮದಾಸ ಬಾಬುಗಳ ಕಾಲೊತ್ತುವ ವರೆಗಿನ ಕೆಲಸವನ್ನೂ ಅವನು ಅತ್ಯಂತ ಮನಃಪೂರ್ವಕವಾಗಿ ಮಾಡುತ್ತಿದ್ದ. ಯಾವಾಗಲೂ ಒಂದಿಲ್ಲೊಂದು ಮನೆಗೆಲಸದಲ್ಲಿ ತೊಡಗಿಯೇ ಇರುತ್ತಿದ್ದ. ಕಾರ್ಯರಹಿತನಾಗಿರುವುದು ಅವನಿಗೆ ಇಷ್ಟವೇ ಇರಲಿಲ್ಲ.

ಆ ಹುಡುಗನ ಹೆಸರೇ ಹರಿಚರಣ ಮನೆಯ ಯಜಮಾನಿ ಯಾವಾಗಲೂ ಅವನು ಕೆಲಸ ಮಾಡುವುದನ್ನು ಕಂಡು ಆಶ್ಚರ್ಯಚಕಿತಳಾಗುತ್ತಿದ್ದಳು. ಆಕೆ ಇವನಿಗೆ ಆಗಾಗ್ಗೆ ಹೇಳುತ್ತಿದ್ದುದು: "ಹರಿಯಾ, ಇನ್ನೂ ಎಷ್ಟೋ ಜನ ಆಳುಮಕ್ಕಳು ಇರುವರು; ಆದರೂ ಕೆಲಸ ಮಾಡಲಿ. ನೀನು ಇನ್ನೂ ಹುಡುಗ, ಇಷ್ಟೇಕೆ ನೀನು ಕಷ್ಟಪಡುವಿ?" ಹರಿಚರಣನಲ್ಲಿ ಒಂದು ಅವಗುಣ ಮಾತ್ರ ಇದ್ದಿತು: ಯಾವಾಗಲೂ ಅವನಿಗೆ ನಗುವು ಬಹಳ ಇಷ್ಟ. ಆದ್ದರಿಂದ ಅವನು ನಕ್ಕು ಎನ್ನುತ್ತಿದ್ದ "ಅಮ್ಮಾ, ನಾವು ಬಡವರು, ಯಾವಾಗಲೂ ದುಡಿದು, ಕಷ್ಟಪಟ್ಟು ಹೊಟ್ಟೆಹೊರೆದುಕೊಳ್ಳುತ್ತಿರಬೇಕು, ಸುಮ್ಮನೆ ಕುಳಿತರೆ ಯಾರು ಕೊಡುವರಮ್ಮಾ ಹೊಟ್ಟೆಗೆ.

ಈ ಬಗೆಯಾಗಿ ಹರಿಚರಣ ಸುಖ, ದುಃಖ, ಪ್ರೀತಿ, ಲಾಲನೆಪಾಲನೆ, ಕೆಲಸಬೊಗಸೆಯಲ್ಲಿ ಸುಮಾರು ಒಂದು ವರ್ಷವನ್ನು ಕಳೆದ.

೧

ಸುರಬಾಲಾ ರಾಮದಾಸ ಬಾಬುಗಳ ಚಿಕ್ಕಮಗಳು ಆಕೆಯ ವಯಸ್ಸು ಸುಮಾರು ಐದು ಆರು ವರ್ಷದ್ದು ಇರಬಹುದು. ಹರಿಚರಣನ ಕೂಡ ಆಕೆಯ ಗೆಳೆತನ ಇಬ್ಬರೂ ಅತ್ಯಂತ ಒಳ್ಳೆಯ ರೀತಿಯಲ್ಲಿ ಕೂಡಿರುತ್ತಿದ್ದರು. ತಾಯಿಯು ಈ ಹುಡುಗೆಗೆ ಹಾಲು ಕುಡಿಸಲು ಹೋದಾಗ ಒಮ್ಮೊಮ್ಮೆ ತಾಯಿ ಮತ್ತು ಮಗಳ ನಡುವೆ ದ್ವಂದ್ವಯುದ್ಧವಾಗುತ್ತಿದ್ದಿತು, ತಾಯಿಗೆ ಹಾಲನ್ನು ಕುಡಿಸುವುದಾಗುತ್ತಿರಲಿಲ್ಲ. ಹಾಲನ್ನು ಕುಡಿಸದಿದ್ದರೆ ಎಲ್ಲಿ ತನ್ನ ಮಗು ಸತ್ತು ಹೋಗುವುದೊ ಎಂಬ ಚಿಂತೆ ಆಕೆಗೆ. ಆಗ ತಾಯಿಯು ಸಿಟ್ಟಿನಿಂದ ಮಗಳ ಕೆನ್ನೆಗೆ ಒಂದು ಏಟು ಕೊಡುತ್ತಿದ್ದಳು. ಆದಾಗ್ಯೂ ಗಿರಿಬಾಲೆಯು ಹಾಲನ್ನು ಕುಡಿಯುತ್ತಲೇ ಇರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಹರಿಚರಣ ಬಂದು ಗಿರಿಬಾಲೆಗೆ "ಹಾಲು ಕುಡಿಯಮ್ಮಾ" ಎಂದು ಹೇಳಿದ ಬಳಿಕ ಆ ಹುಡುಗೆಯು ಸುಮ್ಮನೆ ಹಾಲನ್ನು ಕುಡಿದುಬಿಡುತ್ತಿದ್ದಳು.

ಎಷ್ಟೋ ಅನಾವಶ್ಯಕ ಮಾತುಗಳನ್ನು ನಾನು ಹೇಳಿಬಿಟ್ಟೆ. ಇರಲಿ ಬಿಡಿರಿ, ಇನ್ನು ಬೇಕಾದುದಷ್ಟನ್ನೇ ಹೇಳುವೆ. ತಾತ್ಪರ್ಯ ಇಷ್ಟೇ ಗಿರಿ ಬಾಲೆಯು ಹರಿಚರಣನನ್ನು ಅತ್ಯಂತ ಪ್ರೀತಿಸುತ್ತಿದ್ದಳು ಎಂದಿಷ್ಟೇ ತಿಳಿದು ಕೊಂಡು ಬಿಡಿರಿ ನೀವು.

ದುರ್ಗಾದಾಸ ಬಾಬುಗಳ ವಯಸ್ಸು ಇಪ್ಪತ್ತು ಇದ್ದಾಗಿನ ಮಾತನ್ನು ನಿಮಗೆ ಹೇಳುವೆ. ಆಗ ಅವರು ಕಲ್ಕತ್ತೆಯಲ್ಲಿ ಓದುತ್ತಿದ್ದರು. ತಮ್ಮೂರಿಗೆ ಬರಬೇಕಾದರೆ ಅವರು ಬಹಳ ಕಷ್ಟಪಡಬೇಕಾಗುತ್ತಿದ್ದಿತು. ಸ್ಟೀಮರ ಹತ್ತ ಬೇಕಾಗುತ್ತಿದ್ದಿತು, ಹತ್ತು ಹನ್ನೆರಡು ಹರದಾರಿ ನಡೆಯಬೇಕಾಗುತ್ತಿದ್ದಿತು. ದಾರಿಯಾದರೂ ಏನು ? ಕಲ್ಲು ಮುಳ್ಳು ತಗ್ಗು ಉಳ್ಳದು. ಆದುದರಿಂದ ದುರ್ಗಾದಾಸರು ಊರಿಗೆ ಬಹಳ ಅಪರೂಪವಾಗಿ ಬರುತ್ತಿದ್ದರು.

ಈಗ ಮಗನು ಬಿ. ಎ. ಪಾಸಾಗಿ ಬಂದಿರುವ. ಈಗ ತಾಯಿಗೆ ಬಹಳ ಕೆಲಸ, ಬಹಳ ಚಿಂತೆ ಮಗನ ಬಗ್ಗೆ. ಮನೆಯವರೆಲ್ಲರೂ ಮಗನಿಗೆ ಉಣಿಸು, ತಿನಿಸು ಮುಂತಾದುದರಲ್ಲಿಯೇ ತೊಡಗಿರುವರು. ಬಗೆಬಗೆಯ ರುಚಿಕರ

ತಿಂಡಿ ತೀರ್ಥಗಳನ್ನು ಮಾಡಿ ಮಗನಿಗೆ ಕೊಡುವ ಕಾರ್ಯವು ನಡೆದಿರುವುದು. ಬಹಳ ಕಷ್ಟಪಟ್ಟು ಓದಿ ಬಿ. ಎ. ಆಗಿ ಬಂದಿರುವನಲ್ಲವೇ ?

ದುರ್ಗಾದಾಸ ಬಾಬುಗಳು ಕೇಳಿದರು "ಅಮ್ಮಾ, ಈ ಹುಡುಗನಾರು?"

ತಾಯಿಯೆಂದಳು " ಇವನೊಬ್ಬ ಕಾಯಸ್ಥರ ಹುಡುಗ, ತಂದೆ ತಾಯಿ ಯಾರೂ ಇಲ್ಲ, ಆದುದರಿಂದಲೇ ನಿನ್ನ ತಂದೆಯವರು ಇವನನ್ನು ಮನೆಯಲ್ಲಿ ಇಟ್ಟುಕೊಂಡಿರುವರು. ಆಳುಮಕ್ಕಳ ಕೆಲಸವನ್ನೆಲ್ಲ ಮಾಡುತ್ತಾನೆ. ಬಹಳ ಒಳ್ಳೆಯ ಹುಡುಗ. ಯಾರು ಏನೇ ಎನ್ನಲಿ, ಕೋಪಿಸಿಕೊಳ್ಳುವುದೇ ಇಲ್ಲ. ಪಾಪ, ಅನಾಥ. ಇನ್ನೂ ಚಿಕ್ಕ ಬಾಲಕ. ನನಗೆ ಬಹಳ ಪ್ರೀತಿಬರುವುದು ಇವನನ್ನು ನೋಡಿ ! "

ದುರ್ಗಾದಾಸ ಬಾಬುಗಳು ಮನೆಗೆ ಬಂದಬಳಿಕ ಹರಿಚರಣನ ಪರಿಚಯವಾದುದು ಇದೇ ಮೊದಲ ಸಲ.

ಇರಲಿ. ಇತ್ತಿತ್ತಲಾಗಿ ಹರಿಚರಣ ಬಹಳ ಕೆಲಸ ಮಾಡಬೇಕಾಗುತ್ತಿರುವುದು. ಇದರಿಂದ ಅವನಿಗೆ ದುಃಖವಾಗಿದೆಯೇನು? ಇಲ್ಲ. ಅವನಿಗೆ ಕೆಲಸದಲ್ಲಿಯೇ ಸಂತೋಷ. ಚಿಕ್ಕ ಬಾಬೂ ( ದುರ್ಗಾದಾಸ ) ಗಳಿಗೆ ಸ್ನಾನ ಮಾಡಿಸುವುದು, ಅವರ ಕೋಣೆಯಲ್ಲಿ ಅವರಿಗೆ ಕುಡಿಯುವ ನೀರನ್ನಿಡುವುದು, ಸಕಾಲಕ್ಕೆ ತಾಂಬೂಲವನ್ನು ಒದಗಿಸುವುದು, ಗುಡಗುಡಿ ತುಂಬಿ ತಂದು ಕೊಡುವುದು ಇತ್ಯಾದಿ ಕಾರ್ಯಗಳನ್ನು ಮಾಡುತ್ತಿರುವ, ಇವೆಲ್ಲ ಕಾರ್ಯಗಳಲ್ಲಿ ಅವನು ನಿಪುಣ. ದುರ್ಗಾದಾಸ ಬಾಬುಗಳೂ ಆಗ್ಗಾಗ್ಗೆ ಯೋಚಿಸುತ್ತಿದ್ದರು " ಹುಡುಗ ಬಹಳ 'ಇಂಟೆಲಿಜೆಂಟ್' (ಹುಷಾರಿ) ಇರುವ. ಇವನ ಹೊರತು ಬೇರೆಯಾರಾದರೂ ಅವರ ಕಾರ್ಯಗಳನ್ನು ಎಂದಾದರೂ ಮಾಡಿದರೆ ಅವು ಚಿಕ್ಕ ಬಾಬೂಗಳ ಮನಸ್ಸಿಗೆ ಬರುತ್ತಿರಲೇ ಇಲ್ಲ. ಹರಿಚರಣನೇ ತಮ್ಮ ಕಾರ್ಯಮಾಡಬೇಕೆಂದು ಅವರ ಇಷ್ಟ.

೨

ಎಲ್ಲಿಯ ನೀರು ಎಲ್ಲಿಗೆ ಹೋಗಿ ಸಾಯುವುದೊ ತಿಳಿಯದು. ನೆನಪಿರುವುದೇನು? ಒಂದು ಬಾರಿ ನಾವಿಬ್ಬರೂ ಅಳುತ್ತ ಅಳುತ್ತ ಒಂದು ತಿಳಿವು ಬಾರದ ತಿಳಿದುಕೊಳ್ಳಲು ಕಠಿಣವಿದ್ದ ತತ್ವವನ್ನು ಓದಿದ್ದೆವು. ಆ ತತ್ವ ಎಲ್ಲ ಮಾತುಗಳಿಗೂ ಅನ್ವಯಿಸುವುದೆಂದು ನನಗೆನಿಸುವುದು. ಜಗತ್ತಿನಲ್ಲಿ · ಬಳಿ

ತನ್ನು ಮಾಡಿದರೆ ಒಳ್ಳೆಯದೇ ಆಗುವುದು' ಎಂದು ಇರುವುದೇನು! 'ಒಳ್ಳೆ
ತನ್ನು ಮಾಡಿದರೆ ಕೆಟ್ಟದಾಗುವುದು' ಎಂಬ ಮಾತು ಇಲ್ಲವೇನು? ಈ ತತ್ವ
ವನ್ನು ನೀವು ಕಂಡಿರದಿದ್ದರೆ ಬನ್ನಿರಿ ನಿಮಗೆ ನಾನು ತೋರಿಸುವೆ. ಈ
ತತ್ವವೇ ಅತ್ಯಂತ ಗಹನವಾದುದು.'

ಮೇಲಿನ ಮಾತುಗಳೆಲ್ಲವೂ ಎಲ್ಲರಿಗೂ ತಿಳಿಯಲೇಬೇಕೆಂದು ನಾನು
ಹೇಳುವುದಿಲ್ಲ. ಇದು ಆವಶ್ಯಕವೂ ಇಲ್ಲ. ನಿಮಗೆ ದರ್ಶನಶಾಸ್ತ್ರದ ಉಪ
ದೇಶವನ್ನು ಕೊಡಬೇಕೆಂಬ ಉದ್ದೇಶವೂ ನನ್ನದಿಲ್ಲ. ಆದಾಗ್ಯೂ ನಮ್ಮನಮ್ಮಲ್ಲಿ
ಒಂದೆರಡು ಮಾತುಗಳನ್ನು ಹೇಳಿಕೇಳಿಕೊಂಡರೆ ತಪ್ಪೇನು? ಅಡ್ಡಿಯೇನು?

ಈ ದಿನ ದುರ್ಗಾದಾಸ ಬಾಬುಗಳು ಒಂದು ದೊಡ್ಡ ಭೋಜನ ಸಮಾ
ರಂಭಕ್ಕೆ ಹೋಗಬೇಕಾಗಿರುವುದು. ಅವರು ಮನೆಯಲ್ಲಿ ಈ ದಿನ ಉಣ್ಣುವು
ದಿಲ್ಲ. ತಿರುಗಿ ಮನೆಗೆ ಬರಲು ಬಹು ರಾತ್ರಿಯಾಗಬಹುದು. ಆದ್ದರಿಂದ
ಹರಿಚರಣನಿಗೆ ಎಲ್ಲ ಕೆಲಸವನ್ನು ಮುಗಿಸಿ ಹೊರಗೆ ಮಲಗಿಕೊಳ್ಳಲು
ಹೇಳಿದ್ದರು.

ಇನ್ನು ಹರಿಚರಣನ ವಿಷಯವಾಗಿ ಒಂದೆರಡು ಮಾತುಗಳನ್ನು
ಹೇಳುವೆ. ದುರ್ಗಾದಾಸ ಬಾಬುಗಳು ರಾತ್ರಿಯಲ್ಲಿ ಹೊರಗಿನ ಕೋಣೆ
ಯೊಳಗೇ ಮಲಗುತ್ತಿದ್ದರು. ಇದರ ಕಾರಣವನ್ನು ಬಹಳ ಜನರು ಅರಿಯ
ಲಾರರು. ಹೆಂಡತಿಯು ತವರು ಮನೆಗೆ ಹೋದಬಳಿಕ ಹೊರಗಿನ ಕೋಣೆ
ಯಲ್ಲಿ ಮಲಗುವುದೇ ಅವರಿಗೆ ಹೆಚ್ಚು ಇಷ್ಟವಿದ್ದಿತೆಂದು ನನ್ನ ತಿಳಿವಳಿಕೆ.

ರಾತ್ರಿ ಚಿಕ್ಕಬಾಬುಗಳ ಹಾಸುಗೆ ಹಾಸುವುದು, ಅವರು ಮಲಗಿ
ಕೊಳ್ಳುವಾಗ ಅವರ ಕಾಲನ್ನೊತ್ತುವುದು ಮುಂತಾದ ಕಾರ್ಯಗಳನ್ನು
ಮಾಡುವುದು ಹರಿಚರಣನ ಕೆಲಸವಾಗಿದ್ದಿತು. ಅವರಿಗೆ ಚೆನ್ನಾಗಿ ನಿದ್ರೆ
ಹತ್ತಿದ ಬಳಿಕ ಹರಿಚರಣ ಪಕ್ಕದ ಕೋಣೆಗೆ ಹೋಗಿ ಮಲಗಿಕೊಳ್ಳುತ್ತಿದ್ದ.

ಸಾಯಂಕಾಲವಾಗುವ ಮುನ್ನವೇ ಹರಿಚರಣನಿಗೆ ತಲೆನೋವು ಸುರು
ವಾಯಿತು. ಇನ್ನು ಜ್ವರ ಬರಲು ತಡವಿಲ್ಲ ಎಂದು ಅವನಿಗೆನಿಸಿತು. ಆಗ್ಗಾಗ್ಗೆ
ಅವನಿಗೆ ಜ್ವರ ಬರುತ್ತಿದ್ದುವು. ಅವುಗಳ ಪೂರ್ವಲಕ್ಷಣಗಳ ಅರಿವು ಅವನಿಗಿ
ದ್ದಿತು. ಹರಿಚರಣನಿಗೆ ಕುಳಿತುಕೊಳ್ಳುವುದೂ ಅಸಾಧ್ಯವಾದ ಬಳಿಕ ತನ್ನ
ಸ್ಥಳಕ್ಕೆ ಹೋಗಿ ಮಲಗಿದ. ಚಿಕ್ಕ ಬಾಬುಗಳ ಹಾಸುಗೆಯನ್ನು ಹಾಸುವು

ವಿದೆ ಎಂಬುವದರ ಅರಿವು ಕೂಡ ಅವನಿಗೆ ಆಗ ಇರಲಿಲ್ಲ. ರಾತ್ರಿ, ಎಲ್ಲರೂ ಊಟಮಾಡಿದರು, ಆದರೆ ಹರಿಚರಣ ಊಟಕ್ಕೆ ಬರಲಿಲ್ಲ ಅವನ 'ಅಮ್ಮಾ' ಅವನನ್ನು ನೋಡಲು ಬಂದರು ಶರೀರದ ಮೇಲೆ ಕೈಯಿಟ್ಟು ನೋಡಿದಳು ಬಹಳ ಬಿಸಿಯಾಗಿದ್ದಿತು. ಜ್ವರ ಬಂದಿವೆಯೆಂಬದನ್ನು ಅರಿತುಕೊಂಡಳ ಆದುದರಿಂದ ಊಟಕ್ಕೆ ಒತ್ತಾಯ ಮಾಡದೆ ಹಾಗೇಯೇ ಹೊರಟು ಹೋದಳು.

ರಾತ್ರಿ ಹನ್ನೆರಡು ಅಥವಾ ಒಂದು ಬಾರಿಸಿರಬಹುದು. ಭೋಜನ ತೀರಿಸಿಕೊಂಡು ಚಿಕ್ಕಬಾಬುಗಳು ಮನೆಗೆ ಬಂದರು. ನೋಡಿದರು ಹಾಸುಗೆ ಹಾಸಿರಲಿಲ್ಲ! ಒಂದು ಕಡೆಗೆ ನಿದ್ದೆ ಬರುತ್ತಿದ್ದಿತು, ಇನ್ನೊಂದು ಕಡೆಗೆ ಮನೆಗೆ ಹೋಗಿ ಆರಾಮದಿಂದ ಮಲಗಿಕೊಳ್ಳುವೆ, ಹರಿಯಾ ಬೂಟುಗಳನ್ನು ಬಿಚ್ಚಿ ಕಾಲೊತ್ತತೊಡಗುವ ಮತ್ತು ಹಾಯಾಗಿ ನಿದ್ರೆಮಾಡಿ ಬೆಳಿಗ್ಗೆ ಎದ್ದರಾಯಿತು ಎಂದು ಯೋಚಿಸುತ್ತ ಬರುತ್ತಿದ್ದರು.

ಈಗ ಅತ್ಯಂತ ನಿರಾಶರಾದರು. ಅವರ ಕೋಪ ಎಲ್ಲೆ ಮೀರಿ ಹೋಯಿತು. ಅವರು ಗಟ್ಟಿಯಾಗಿ ಕೂಗಿದರು "ಹರೀ, ಹರಿಯಾ, ಏ ಹರಿಯಾ!" ಹರಿಯಾ ಇದ್ದರಲ್ಲವೆ ಓ ಎನ್ನುವುದು! ಪಾಪ ಬಡವ, ಜ್ವರದಿಂದ ಎಚ್ಚರದಪ್ಪಿ ಮಲಗಿದ್ದ. ಆಗ ದುರ್ಗಾದಾಸ ಬಾಬುಗಳು ಯೋಚಿಸಿದರು. "ಅಯೋಗ್ಯ, ಮಲಗಿದನೆಂದು ತೋರುವುದು." ಅವರು ಅವನ ಕೋಣೆಗೆ ಹೋಗಿ ನೋಡಿದರು ನಿಜವಾಗಿಯೂ ಅವರು ಹೊತ್ತುಕೊಂಡು ಮಲಗಿದ್ದ.

ಈ ದೃಶ್ಯವು ಅವರಿಗೆ ಅಸಹ್ಯವಾಯಿತು. ಅವನ ತಲೆಗೂದಲನ್ನು ಎತ್ತಿ ಹಿಡಿದು ಅವನನ್ನು ಕುಳ್ಳಿರಿಸಲು ಯತ್ನಿಸಿದರು. ಆದರೆ ಅವನು ಹಾಗೇಯೇ ಬಿದ್ದುಕೊಂಡು ಬಿಟ್ಟ. ಈಗಂತೂ ಸಿಟ್ಟು ಮಿತಿಮೀರಿ ಹೋಗಿಯೆ ಬಿಟ್ಟಿತು. ಹಿತಾಹಿತ ಜ್ಞಾನವೂ ಇಲ್ಲದಾಯಿತು. ದುರ್ಗಾದಾಸರು ಹರಿಚರಣನ, ಬೆನ್ನಿಗೆ ಬೂಟಿನಿಂದ ಜೋರಾಗಿ ಒದೆದು ಬಿಟ್ಟರು. ಆದರಿಂದ ಹರಿಯಾ ಎಚ್ಚೆತ್ತು ಎದ್ದು ಕುಳ್ಳಿರಲು ಯತ್ನಿಸಿದ. ಆಗ ದುರ್ಗಾದಾಸ ಬಾಬುಗಳು "ಚಿಕ್ಕಮಕ್ಕಳಂತೆ ಮಲಗಿಕೊಂಡಿರುವೆ, ಹಾಸುಗೆ ನಾನು ಹಾಸಿಕೊಳ್ಳಲೇನು?" ಎಂದರು. ಮತ್ತೆ ಸಿಟ್ಟು ತಲೆಗೇರಿತು ಮತ್ತೆ ಎರಡು ಮೂರು ಸಲ ಒದ್ದರು.

ರಾತ್ರಿಯಲ್ಲಿ ಅದೇ ಜ್ವರದ ಸ್ಥಿತಿಯಲ್ಲಿ ಹರಿಚರಣ ಹಾಸುಗೆ ಹಾಸಿ ಕೊಟ್ಟು, ದುರ್ಗಾದಾಸರ ಪಾದಸೇವೆಯನ್ನು ಮಾಡತೊಡಗಿದ. ಆಗ ಅವನ ಕಣ್ಣಿಂದ ಕಂಬನಿಯ ಬಿಸಿ ಹನಿಯೊಂದು ಅವರ ಪಾದಗಳ ಮೇಲೆ ಬಿದ್ದಿತು ಎಂದು ತೋರುವುದು.

೩

ಇಡಿ ರಾತ್ರಿ ದುರ್ಗಾದಾಸ ಬಾಬುಗಳಿಗೆ ನಿದ್ರೆ ಬರಲಿಲ್ಲ ಆ ಕಣ್ಣೀರಿನ ಒಂದು ಹನಿಯು ಅವರಿಗೆ ಬಹಳ ಬಿಸಿಯೆನಿಸಿತು. ಹರಿಚರಣನನ್ನು ಅವರೂ ಬಹಳ ಪ್ರೀತಿಸುತ್ತಿದ್ದರು. ತನ್ನ ನಮ್ರತೆಯಿಂದ ಅವರಿಗೊಬ್ಬರಿಗಷ್ಟೇ ಅಲ್ಲ. ಅವನು ಮನೆಯ ಪ್ರತಿಯೊಂದು ಪ್ರಾಣಿಗೂ ಪ್ರಿಯನಾಗಿದ್ದ. ವಿಶೇಷವಾಗಿ ಈ ತಿಂಗಳಲ್ಲಿ ಅವನು ಎಲ್ಲರ ಪ್ರೀತಿಗೂ ಹೆಚ್ಚು ಪಾತ್ರನಾಗಿದ್ದ.

ರಾತ್ರಿ ಹರಿಚರಣನ ಬಳಿಗೆ ಹೋಗಿ ಅವನನ್ನು ನೋಡಿಬರಬೇಕೆಂದೂ ಎಷ್ಟು ಏಟುಗಳು ಹೇಗೆ ಬಿದ್ದಿರುವವು, ಎಲ್ಲೆಲ್ಲಿ ನೈ ಬಾತಿರುವುದು ಎಂಬುದನ್ನು ನೋಡಿಬರಬೇಕೆಂದೂ ದುರ್ಗಾದಾಸ ಬಾಬುಗಳು ಯೋಚಿಸಿದರು. ಆದರೆ ಅವನು ಆಳುವಾಗ, ತಾನು ಹೋಗಿ ನೋಡಿ ಬರುವುದು ಉಚಿತವೆ? ಎಂದೂ ಯೋಚಿಸಿದರು. ಜ್ವರ ಇಳಿದಿವೆಯೊ ಇಲ್ಲವೊ ಎಂಬುದನ್ನು ಕೇಳಿಯಾದರೂ ಬರೋಣ ಎಂದು ಎಷ್ಟೋ ಸಲ ವಿಚಾರಮಾಡಿದರು. ಆದರೆ ಈಗ ಅವನ ಹತ್ತಿರ ಹೋಗಲು ಅವರಿಗೇ ನಾಚಿಕೆಯೆನಿಸುತ್ತಿದಿತು. ಬೆಳಿಗ್ಗೆ ಹರಿಚರಣ ಬಾಬುಗಳಿಗೆ ಮುಖವನ್ನು ತೊಳೆದುಕೊಳ್ಳಲಿಕ್ಕೆ ನೀರನ್ನು ಒಯ್ದು ಕೊಟ್ಟ. ದುರ್ಗಾದಾಸ ಬಾಬುಗಳು ಆಗಾದರೂ ಒಂದೆರಡು ಸಾಂತ್ವನೆಯ ಸವಿನುಡಿಗಳನ್ನು ಆಡಿದ್ದರೆ! ಅವನು ಇನ್ನೂ ಬಾಲಕ, ಅವನ ವಯಸ್ಸಾದರೂ ಎಷ್ಟು? ಹದಿಮೂರು ವರ್ಷ ಇನ್ನೂ ತುಂಬಿರಲಿಕ್ಕಿಲ್ಲ. ಹುಡುಗನೆಂದಾದರೂ ಒಂದು ಬಾರಿ ಹತ್ತಿರ ಕರೆದು ಒಂದೆರಡು ಮಾತುಗಳನ್ನು ಆಡಿದ್ದರೆ! ಬೂಟಿನ ಏಟುಗಳು ಹೇಗೆ ಬಿದ್ದಿವೆ, ಎಷ್ಟು ಗಾಯವಾಗಿದೆ, ಎಲ್ಲೆಲ್ಲಿ ಬಾತಿದೆ ಎಂಬುದನ್ನು ನೋಡಿದ್ದರೆ! ಇದೆಲ್ಲವೂ ಇರಲಿ, ಒಂದು ಚಿಕ್ಕ ಹುಗುವೆಂದಾದರೂ ಹತ್ತಿರ ಕರೆದು ಸ್ವಲ್ಪ ವೈದಡವಬಾರದಾಗಿತ್ತೇನು? ಅದರಲ್ಲಿ ನಾಚಿಕೆಯೇನು? ಅವನೂ ಮಾನವ!

ಸುಮಾರು ಒಂಬತ್ತು ಗಂಟೆಗೆ ಎಲ್ಲಿಂದಲೋ ಒಂದ ತಾರು ಬಂದಿತು. ತಾರಿನ ಸಮಾಚಾರವನ್ನು ಕೇಳುತ್ತಲೇ ದುರ್ಗಾದಾಸ ಬಾಬುಗಳ ಬುದ್ಧಿ

ಶಂಕೆ ಹಿಡಿಯಿತು. ಅವರು ಸ್ವಲ್ಪ ಗಾಬರಿಯಾದರು. ಅದನ್ನು ಒಡೆದು ನೋಡಿದರು. ಹೆಂಡತಿಗೆ ಕಾಯಿಲೆ, ಬದುಕುವ ಆಸೆ ? ? ಒಮ್ಮಿಂದೊಮ್ಮೆಗೆ ಹೃದಯದ ಗತಿ ಮಂದವಾಯಿತು. ಅದೇ ದಿನ ಅವರು ಕಲ್ಕತ್ತೆಗೆ ಹೋಗಬೇಕಾಯಿತು. ಗಾಡಿಯಲ್ಲಿ ಕುಳ್ಳಿರುವಾಗಲೇ ಯೋಚಿಸಿದರು. ದೇವಾ ! ನನ್ನ ಈ ದಿನದ ಕರ್ಮಕ್ಕಾಗಿ ಈ ಪ್ರಾಯಶ್ಚಿತ್ತವೇನು ನನಗೆ ? ಹೌದು !

ಸುಮಾರು ಒಂದು ತಿಂಗಳು ಕಳೆಯಿತು. ದುರ್ಗಾದಾಸ ಬಾಬುಗಳ್ಳ ಮೋಲೆ ಈ ದಿನ ಸ್ವಲ್ಪ ಆನಂದದ ಕಳೆಯಿದ್ದಿತು. ಅವರ ಹೆಂಡತಿಗೆ ಹೊಸದಾಗಿಯೆ ಜೀವ ಬಂದಿತೆಂದು ತಿಳಿಯಿರಿ. ಸತ್ತು ಸತ್ತು ಉಳಿದಿರುವಳು. ಇಂದೇ ಪಥ್ಯ ಸುರುವು ಮಾಡಿರುವಳು.

ಮನೆಯಿಂದ ಈ ದಿನ ಒಂದು ಪ್ರತ ಬಂದಿರುವುದು. ದರ್ಗಾದಾಸರ ತಮ್ಮನು ಬರೆದಿರುವನು. ಅದರ ಕೆಳಗೆ ‘ ಪುನಶ್ಚ ’ ಎಂದು ಬರೆದು ಬರೆದಿರುವನು. “ ಅತ್ಯಂತ ದುಃಖದ ಸಂಗತಿ, ಹತ್ತು ದಿನ ಜ್ವರದಿಂದ ಬಳಲಿ ಬಳಲಿ ಹರಿಚರಣ ತೀರಿಕೊಂಡ. ಸಾಯುವ ಮೊದಲು ಅನೇಕ ಬಾರಿ ನಿಮ್ಮನ್ನು ನೋಡಬಯಸಿದ್ದ. ನೀವು ಬಂದಿರೇನು ? ಬಂದಿರೇನು ? ಎಂದು ಕೇಳುತ್ತಿದ್ದ, ನಿಮ್ಮ ದರ್ಶನ ತೆಗೆದುಕೊಂಡು ಪ್ರಾಣಬಿಡಬೇಕೆನ್ನುತ್ತಿದ್ದ. ”

ಅಯ್ಯೋ ಪಾಪ ಅನಾಥ ಮಗ, ತಂದೆತಾಯಿಯಿಲ್ಲದ ತಬ್ಬಲಿ !

ದುರ್ಗಾದಾಸರು ಪತ್ರವನ್ನು ಹರಿದು ಚೂರು ಚೂರು ಮಾಡಿ ಬಿಸಾಡಿಬಿಟ್ಟರು.

—ಶ್ರೀ. ಗುರುನಾಥ ಜೋಶಿ

---

